Photo by P. R. Shinde



ಬಹುಮಾನ
ಪಡೆದ ಶೀರ್ಷಿಕೆ

"ನಮ್ಮಲ್ಲಿ ಒಗ್ಗಟ್ಟಿದ್ದರೂ
ಬಲವಿಲ್ಲ"

ಕಳಿಸಿದವರು:
ಎಸ್. ಬಾಲಸುಬ್ರಹ್ಮಣ್ಯಂ

# ಚಂದಮಾಮ

ಈ ಸಂಚಿಕೆಯಲ್ಲಿ






# ಜಾನಕಿ

ಲಕ್ಸ್ ಟಾಯಿಲೆಟ್ ಸೋಪನ್ನು ಉಪಯೋಗಿಸುತ್ತಾಳೆ.
"ಇಷ್ಟು ಬಿಳಿಯಾದ, ಇಷ್ಟು ಶುದ್ಧವಾದ ಸೋಪು ಇದೊಂದೇ ಎಂದು ತಿಳಿದಿದ್ದೇನೆ!"

ಚಲಚ್ಚಿತ್ರಗಳಲ್ಲಿ ಸದಾ ಯಶಸ್ವಿಯಾಗಿರುವುದಕ್ಕೆ ಅವುಗಳಲ್ಲಿ ಭಾಗವಹಿಸಿಕೊಂಡಿರುವುದು ಮಾತ್ರವೇ ಸಾಲದೆಂಬುದು ಜಾನಕಿಗೆ ಗೊತ್ತಿದೆ. ಅವಳು ಯಾವಾಗಲೂ ಲಕ್ಸ್ ಟಾಯಿಲೆಟ್ ಸೋಪನ್ನು ಉಪಯೋಗಿಸಿ ತನ್ನ ಕೋಮಲ ಚರ್ಮದ ವಿಷಯದಲ್ಲಿ ಜಾಗರೂಕತೆಯನ್ನು ತೆಗೆದುಕೊಳ್ಳುತ್ತಾಳೆ.

ಅತ್ಯಂತ ಬಿಳಿಯಾಗಿರುವ, ಶುದ್ಧವಾದ ಲಕ್ಸ್ ಟಾಯಿಲೆಟ್ ಸೋಪು ಬಹಳ ಸೌಮ್ಯ ರೀತಿಯಲ್ಲಿ, ಖಾತ್ರಿಯಾಗಿ ಚರ್ಮದ ವಿಷಯ ಜಾಗರೂಕತೆಯನ್ನು ತೆಗೆದುಕೊಳ್ಳುತ್ತದೆ. ಅತ್ಯಂತ ಸುಂದರ ಸಿನೆಮ ತಾರೆಯರಂತೆ ನೀವು ಕೂಡ ಅದರ ಮೇಲೆ ಭರವಸೆಯಿಡಿರಿ.

## ಲಕ್ಸ್ ಟಾಯಿಲೆಟ್ ಸೋಪು

ಸಿನೆಮ ತಾರೆಯರ ಸೌಂದರ್ಯ-ಸೋ

LTS. 514-50 KN


ಆರೋಗ್ಯಶಾಲಿಗಳಾದ
ಜನರು ಪ್ರತಿದಿನವೂ
ಲೈಫ್‌ಬಾಯ್ ಸೋಪಿನಿಂದ
ಸ್ನಾನ ಮಾಡುತ್ತಾರೆ
–ಅದು ಅನುದಿನದ*
ಕೊಳೆಯಲ್ಲಿರುವ ಕ್ರಿಮಿಗಳನ್ನು
ತೊಳೆದು ತೆಗೆಯುತ್ತದೆ!
★ ಪ್ರತಿದಿನವೂ ಮೈಗೆ
ತಗಲುವ ಸಾಮಾನ್ಯ ಕೊಳೆಯಲ್ಲಿ
ರುವ ಕ್ರಿಮಿಗಳಿಂದ ರೋಗ ತಗಲುವ
ಅಪಾಯವು ನಮಗೆಲ್ಲರಿಗೂ ಇದೆ. ಆದು
ದರಿಂದಲೇ ಅಷ್ಟು ಅಧಿಕ ಮಂದಿ
ಆರೋಗ್ಯಶಾಲಿ ಜನರು ಯಾವಾಗಲೂ
ಲೈಫ್‌ಬಾಯ್ ಸೋಪಿನಿಂದ ಕೊಳೆ
ಯನ್ನು ಮತ್ತು ಕ್ರಿಮಿಗಳನ್ನು
ತೊಳೆದು ತೆಗೆದು ತಮ್ಮ
ಆರೋಗ್ಯ ರಕ್ಷಣೆ ಮಾಡಿ
ಕೊಳ್ಳುತ್ತಾರೆ —
ಲೈಫ್‌ಬಾಯ್ ಸೋಪು
ನಿರ್ಮಲತೆ ಕೊಟ್ಟು
ಮನೋಲ್ಲಾಸವನ್ನು
ಉಂಟುಮಾಡುತ್ತದೆ!
LIFEBUOY SOAP
LIFEBUOY SOAP

# ರಾಜು ಶೀತಕ್ಕೆ ಪ್ರಥಮ ಚಿಕಿತ್ಸೆ ಕಲಿಯುತ್ತಾನೆ!









ಆಂದಿನ ರಾತ್ರಿ, ರಾಜುವಿನ ತಾಯಿ, ಮಲಗುವ ಹೊತ್ತಿಗೆ ರಾಜುವಿನ ಎದೆ, ಗಂಟಲು ಮತ್ತು ಬೆನ್ನಿಗೆ ಈ ಉತ್ತಮ, ಪರಿಣಾಮಕಾರಿ ಔಷಧವನ್ನು ಹಚ್ಚಿ ತಿಕ್ಕಿದಳು. ತಕ್ಷಣವೇ ವಿಕ್ಸ್ ವೇಪೋರಬ್ ರಾಜುವಿನ ಶೀತವನ್ನು ಗುಣಪಡಿಸಲು ತೊಡಗಿತು.

## ವಿಕ್ಸ್ ವೇಪೋರಬ್ 2 ವಿಧಗಳಲ್ಲಿ ಶೀತಗಳ ವಿರುದ್ಧ ಹೋರಾಡುವುದು!



ಚರ್ಮದ ಮೂಲಕ ಕೆಲಸ ಮಾಡುತ್ತದೆ.

ಶ್ವಾಸ ನಾಳಗಳ ಮೂಲಕ ಕೆಲಸಮಾಡುತ್ತದೆ.

1. ಹಚ್ಚಿದೊಡನೆಯೇ ಪರಿಣಾಮಕಾರಿಯಾದ ವಿಕ್ಸ್ ವೇಪೋರಬ್ ರಾಜುವಿನ ಚರ್ಮದ ಮೂಲಕ ಕೆಲಸ ಮಾಡತೊಡಗಿತು. ಇದು ಆತನ ಎದೆಯನೋವನ್ನು ನಿವಾರಿಸಿ ಬಳಲಿಕೆಯನ್ನು ಪರಿಹರಿಸಿತು.

2. ಇದೇ ಸಮಯದಲ್ಲಿ ವಿಕ್ಸ್ ವೇಪೋರಬ್ ತೀಕ್ಷ್ಣವಾದ ಕಡುಗಂಪನ್ನು ಬೀರಿತು ಮತ್ತು ರಾಜು ಇದನ್ನು ಉಸಿರಿನಲ್ಲಿ ಹೀರಿಕೊಂಡನು. ವಿಕ್ಸ್ ವೇಪೋರಬ್‌ನ ಒಳ್ಳೆಯ ಕಂಪು ಶೀತಗಳಿಗೆ ತೀಕ್ಷ್ಣವಾದ ಔಷಧವಾಗಿರುತ್ತದೆ. ಇದು ರಾಜುವಿನ ನೆಗಡಿ ತುಂಬಿದ ಮೂಗನ್ನು ಸ್ವಚ್ಛ ಮಾಡಿತು, ಆತನ ಗಂಟಲು ನೋವನ್ನು ಉಪಶಮನಮಾಡಿತು ಮತ್ತು ಕೆಮ್ಮನ್ನು ಪರಿಹರಿಸಿತು.

ಮರುದಿನ ಮುಂಜಾನೆ, ರಾಜುವಿನ ಶೀತ ಬಹಳ ಗುಣ ವಾಗಿತ್ತು!





## ಶೀತಗಳಿಗೆ ಅತ್ಯುತ್ತಮ ಔಷಧ

ವಿಕ್ಸ್ ವೇಪೋರಬ್

ಎದೆ, ಗಂಟಲು ಮತ್ತು ಬೆನ್ನಿಗೆ ತಿಕ್ಕಿ ಪರಿಹಾರ!

VR-330 K



ಎಷ್ಟೋ
ಸುಂದರ ವಧುಗಳಂತೆ



ಇವಳೂ

**ಜೈ**

ಮೈ ಸಾಬೂನನ್ನು
ಅದರ ಪರಿಮಳಕ್ಕಾಗಿ
ಉಪಯೋಗಿಸುತ್ತಾಳೆ

ತಾತಾ ತಯಾರಿಕೆ

ಸಂಪೂರ್ಣ ಭಾರತೀಯ
- ಬಂಡವಾಳ
- ಸಂಚಾಲಕತ್ವ
- ಶ್ರಮ

ದಿ ತಾತಾ ಆಯಿಲ್ ಮಿಲ್ಸ್ ಕಂಪೆನಿ, ಲಿಮಿಟೆಡ್
ಸೇಲ್ಸ್ ... 2 ಮಹಾತ್ಮಾ ಗಾಂಧೀ ರೋಡ್, ಬೆಂಗಳೂರು-1

# ಮಮೀ ದುಗ್ಧಾನ್ನ

ನೆದರ್ಲಾಂಡ್ಸ್‌ನ ಹಸಿರುಗಾವಲಿನಲ್ಲಿ ಬೆಳೆದ ಉತ್ಕೃಷ್ಟವಾದ ಹಸುಗಳ ಸ್ವಚ್ಛವಾದ ಹಾಲಿನಲ್ಲಿ ಚಿಕ್ಕಮಕ್ಕಳಿಗಾಗಿ ತಯಾರಿಸಲ್ಪಟ್ಟದ್ದು. 'ಮಮೀ'ಯಲ್ಲಿ 'ಡಿ' ವಿಟಮಿನ್ನುಗಳಿರುತ್ತವೆ.







ಸೋಲ್ ಡಿಸ್ಟ್ರಿಬ್ಯೂಟರ್:

**ಎಮ್. ಎ. ಮಲಿಕ್ ಅಂಡ್ ಕಂ.,**

91, ಮಹಮ್ಮದ್ ಅಲೀ ರೋಡ್,

ಬೊಂಬಾಯಿ - 3.




ಸೋಲ್ ಏಜೆಂಟರು: **ಎಂ. ಎಂ. ಖಾನ್ ಭಟ್ವಾಲಾ**

ರಾಯಪೂರ್ - ಅಹಮದಾಬಾದ್

# ಗ್ರೈಪ್ ಸಿರಪ್ - ಐ. ಟಿ. ಎಲ್.

ನಿಮ್ಮ ಮುದ್ದು ಕಂದನ ಅಜೀರ್ಣ ವ್ಯಾಧಿಗಳನ್ನು ತಡೆದು ಆರೋಗ್ಯ ಕಾಪಾಡುವ ಅಮೃತಪಾನ.



ತಯಾರಕರು:

**ದಿ ಮೈಸೂರು ಇಂಡಸ್ಟ್ರಿಯಲ್ ಅಂಡ್ ಟೆಸ್ಟಿಂಗ್ ಲ್ಯಾಬೋರಟರಿ, ಲಿ.,**

**ಮಲ್ಲೇಶ್ವರಂ :: ಬೆಂಗಳೂರು-3**

ಎಲ್ಲಾ ಪ್ರಮುಖ ವ್ಯಾಪಾರಿಗಳಲ್ಲೂ ದೊರೆಯುತ್ತದೆ

ವ್ಯಾಪಾರದ ಗುರುತು 


## ಗ್ರೈಪ್ ಸಿರಪ್



# ಚಂದಮಾಮ

ಸಂಚಾಲಕರು: 'ಚಕ್ರಪಾಣಿ'

"ಮಕರದೇವತೆ" ಯಾದಮೇಲೆ ಏನು ಬರುತ್ತೋ ಎಂದು ಇದಿರು ನೋಡುತಿದ್ದಿರಲ್ಲವೆ? ಈ ಸಂಚಿಕೆಯಿಂದ "ಮೂವರು ಮಾಂತ್ರಿಕರು" ಹೊರಟಿದ್ದಾರೆ. ಈ ಧಾರಾವಾಹಿ ಕಥೆ ನಿಮ್ಮನ್ನು ಮಂತ್ರಮುಗ್ಧಗೊಳಿಸಿ ಆನಂದದಲ್ಲಿ ಹಾರಾಡಿಸುವುದೆನ್ನಲು ಯಾವ ಸಂದೇಹವೂ ಇಲ್ಲ. "ಚಂದಮಾಮ" ದಲ್ಲಿ ಬಂದ ಧಾರಾವಾಹಿ ಕಥೆಗಳನ್ನು ಪುಸ್ತಕರೂಪದಲ್ಲಿ ಪ್ರಕಟಿಸಬೇಕೆಂದು ಹಲವು ಓದುಗರು ಬರೆದು ಕೇಳಿಕೊಂಡಿದ್ದಾರೆ. ಅವರೆಲ್ಲರಿಗೂ ನಮ್ಮ ಹೃದಯಪೂರ್ವಕ ಕೃತಜ್ಞತೆಗಳು. ಕಾಲಕ್ರಮದಲ್ಲಿ ಅವರೆಲ್ಲರ ಕೋರಿಕೆಗಳೂ ಈಡೇರಬಹುದೆಂದಷ್ಟೇ ಈಗ ತಿಳಿಸುತ್ತೇವೆ. ಇನ್ನು ಹಲವರು ಚಂದಮಾಮದ ಮುಖಚಿತ್ರಗಳನ್ನೆಲ್ಲಾ ಸೇರಿಸಿ ಪ್ರತ್ಯೇಕ ಚಿತ್ರ ಪುಸ್ತಕವಾಗಿ ಪ್ರಕಟಿಸಬೇಕೆಂದೂ ಕೇಳುತ್ತಾರೆ. ಏನಾತುರವೋ! ಎಂಥ ಕುತೂಹಲವೋ! ಮಹಾಭಾರತದ ಚಿತ್ರ ಪರಂಪರೆ ಸಾಗುತ್ತಾಯಿದೆ. ಇನ್ನೂ ಮುಗಿದಿಲ್ಲ. ಸದ್ಯ ನೀವು ಅವುಗಳನ್ನೇ ಕಳೆದುಕೊಳ್ಳದೆ ಸಂಗ್ರಹಿಸಿ ಆಲ್ಬಂ ಮಾಡಿಇಟ್ಟುಕೊಳ್ಳಿ. ಕೆಲವು ವರ್ಷಗಳಮೇಲೆ ಅವು ಸ್ವಂತ ನಿಮಗೇ ಹೊಸ ಆನಂದವನ್ನು ಕೊಡಬಲ್ಲುವು. ದೇವರು ಕರುಣಿಸಿದರೆ ನಾವೂ ನಿಮ್ಮಾಶೆಯನ್ನು ಪೂರಯಿಸಿಯೇವು. ಒಟ್ಟಿನ ಮೇಲೆ "ಚಂದಮಾಮ"ನು ತಿಂಗತಿಂಗಳೂ ತರುವ ವಿವಿಧ ಕಥೆಗಳನ್ನು ಓದಿ ಆಸ್ವಾದಿಸಿ ನೀತಿ ಸಾರವನ್ನು ಗ್ರಹಿಸಿ ನೀವೂ ನಿಮ್ಮೊಂದಿಗೆ ನಾವೂ ಮುಂದಕ್ಕೆ ಬರಬೇಕೆಂಬುದೇ ನಮ್ಮ ಬಯಕೆಯಾಗಿದೆ. ನಿಮ್ಮ ಆದರಾಭಿಮಾನಗಳಿಗೆ ತುಂಬಾ ಅಭಿನಂದನೆಗಳು.

ಸಂಚಿಕೆ ೨

ಫೆಬ್ರವರಿ ೧೯೬೭

ಸಂಪುಟ ೧೮

# ಮುಖಚಿತ್ರ

ತಂದೆಯ ಅಭಿಲಾಷೆಯಂತೆ ಸಾವಿತ್ರಿ ತನ್ನ ಭಾವೀಪತಿಯನ್ನು ಹುಡುಕುತ್ತಾ ಪರಿವಾರ ದೊಂದಿಗೆ ಹೊರಟಳು. ಅನೇಕ ಪುಣ್ಯತೀರ್ಥಗಳನ್ನು ಸೇವಿಸುತ್ತಾ, ಅಡವಿಗಳಲ್ಲಿ ತಪಸ್ಸು ಮಾಡುತ್ತಿರುವ ರಾಜರ್ಷಿಗಳ ಕುಮಾರರನ್ನು ನೋಡಿದಳು. ಹೀಗೆ ಸಾಗುವಾಗ ಒಂದು ಆಶ್ರಮದ ಬಳಿಯಲ್ಲಿ ಸತ್ಯವಾನನೆಂಬ ಯುವಕನು ಕಾಣಿಸಿದನು.

ಆತನ ತಂತೆ ದ್ಯುಮತ್ಸೇನನು ಹಿಂದೆ ಸಾಳ್ವದೇಶದ ರಾಜನಾಗಿದ್ದ. ಆತನಿಗೆ ಎರಡು ಕಣ್ಣುಗಳೂ ಹೋದುದರಿಂದ ಶತ್ರುರಾಜರು ಅವನ ರಾಜ್ಯವನ್ನು ಅಪಹರಿಸಿ ಅವನನ್ನು ಅಡವಿಗೆ ಕಳುಹಿಸಿದರು.

ಸತ್ಯವಾನನನ್ನು ನೋಡಿ ಸಾವಿತ್ರಿ ಅವನೇ ತನಗೆ ತಕ್ಕ ಪತಿಯೆಂದು ನಿರ್ಣಯಿಸಿ ಕೊಂಡಳು. ಕೂಡಲೇ ತನ್ನ ಯಾತ್ರೆಯನ್ನು ಮುಗಿಸಿ ಮದ್ರದೇಶಕ್ಕೆ ತಿರುಗಿ ಬಂದಳು. ಅದೇ ಸಮಯಕ್ಕೆ ನಾರದಮುನಿಯೂ ಅಶ್ವಪತಿಯನ್ನು ನೋಡಲು ಬಂದನು.

ಅಶ್ವಪತಿ ಮಗಳನ್ನು ಕುರಿತು ಹೋದ ಕಾರ್ಯವೇನಾಯಿತೆಂದು ಕೇಳಿದ. ಸಾವಿತ್ರಿ ಸತ್ಯವಾನನನ್ನೆ ಮದುವೆಮಾಡಿಕೊಳ್ಳಲು ನಿಶ್ಚಯಿಸಿರುವೆನೆಂದು ತಿಳಿಸಿದಳು.

ಆಗ ಅಶ್ವಪತಿರಾಜನು ನಾರದನನ್ನು ಕುರಿತು—"ನನ್ನ ಮಗಳು ಆರಿಸಿಕೊಂಡ ವರನ ವಿಷಯ ನಿಮಗೆ ಗೊತ್ತೆ? ಇವಳಿಗೆ ಆತನು ಎಲ್ಲಾ ವಿಧದಲ್ಲಿಯೂ ತಕ್ಕವನಾಗು ವನೆ? ಹೇಳಬೇಕು" ಎಂದು ಕೇಳಿದ.

ನಾರದನು ಅನುಮಾನದಿಂದ ತಲೆಯಾಡಿಸಿ—"ರಾಜ, ಈಗಿರುವ ರಾಜಕುಮಾರ ರಲ್ಲಿ ಸತ್ಯವಾನನಿಗೆ ಸಮಾನರಾದವರು ಯಾರೂ ಇಲ್ಲ. ಆದರೆ ಒಂದೇ ಲೋಪ. ಇಂದಿಗೆ ಸರಿಯಾಗಿ ಒಂದು ವರ್ಷ ತುಂಬುವಾಗ ಆತನಿಗೆ ಆಯುಷ್ಯ ಮುಗಿಯುತ್ತದೆ. ಇದನ್ನು ತಿಳಿಯದೆ ಸಾವಿತ್ರಿ ಆತನನ್ನು ಆರಿಸಿಕೊಂಡಿದ್ದಾಳೆ" ಎಂದ. ಇದನ್ನು ಕೇಳಿ ಅಶ್ವಪತಿ ದಿಗಿಲುಬಿದ್ದು—"ಅಮ್ಮಾ, ಈ ಅಲ್ಪಾಯುಷಿಯನ್ನು ಬಿಟ್ಟು ಬೇರೊಬ್ಬನನ್ನು ಆರಿಸಿಕೊ" ಎಂದ.

ಆದರೆ ಸಾವಿತ್ರಿ ಒಪ್ಪಲಿಲ್ಲ. "ಹೆಂಗುಸು ಮನೋವಾಕ್ಕಾಯದಿಂದ ಒಬ್ಬನನ್ನೇ ವರಿಸುತ್ತಾಳೆ. ಒಂದುದಿನವಾದರೂ ಸರಿಯೇ, ಸತ್ಯವಾನನಿಗೇ ಹೆಂಡತಿಯಾಗುವೆನಲ್ಲದೆ ಬೇರೆಯಿಲ್ಲ" ಎಂದು ಹಟಹಿಡಿದಳು.

ಅವಳ ಸ್ಥೈರ್ಯವನ್ನರಿತ ನಾರದ "ಇವಳ ಇಷ್ಟದಂತೆಯೇ ಮದುವೆಮಾಡಿಸಿರಿ" ಎಂದು ಸಲಹೆ ಹೇಳಿದ. ಉಪಾಯವಿಲ್ಲದೆ ಅಶ್ವಪತಿ ಮುಹೂರ್ತವಿಡಿಸಿದ. ದ್ಯುಮತ್ಸೇನನ ಆಶ್ರಮದಲ್ಲಿ ಸಾವಿತ್ರೀ ಸತ್ಯವಾನರ ವಿವಾಹವು ವೇದೋಕ್ತವಾಗಿ ಜರುಗಿತು.

## ಇದುವೆ ನೋಡು ಕಬ್ಬಿಣ!

ಗೆಳೆಯರೆಲ್ಲ ಬನ್ನಿರೀಗ
ಮಾತನೊಂದ ಹೇಳುವೆ
ಪಕ್ಕದಲ್ಲಿ ಸಾಲು ಕಟ್ಟಿ
ಮನವ ಕೊಟ್ಟು ಕೇಳಿರಿ!
ಅಮ್ಮ ಹೋಗಿ ತೋಟದಲ್ಲಿ
ಬಾಳೆ ಕೊಯ್ವ ಕತ್ತಿಯ
ಯಾರು ಎಲ್ಲಿ ಹೇಗೆ ಮಾಡಿ
ಇಲ್ಲಿ ಕಳುಹಿಕೊಟ್ಟರು?
ನೆಲವ ಅಗೆದು ಆಳಮಾಡಿ
ಜನರು ಇದರ ಒಳಗೆ ಇಳಿದು
ಅದುರು ಅದುರು ಕೂಡಿ ಕೂಡಿ
ಮೇಲೆ ಎಳೆದು ತೆಗೆವರು!
ಅದನು ತಂದು ಕುಲುಮೆಯಲ್ಲಿ
ಕಾಸಿ ಎರಕ ಹೊಯ್ದು ಮಾಡಿ
ಕೊಡಲು ಆದ ಕಬ್ಬಿಣ!
ಇದುವೆ ನೋಡು ಕಬ್ಬಿಣ!
ಕೆಂಡದಲ್ಲಿ ಬೆಂಕಿಹಾಕಿ
ಉರಿಯ ಮಾಡುತ
ಅಡಿಗಲ್ಲ ಮೇಲೆ ಇರಿಸಿ
ಕಾಸಿ ಕಾಸಿ ಬಡಿಯುತ!
ಕಮ್ಮಾರನು ಕತ್ತಿ ಮಾಡಿ
ಮಾರಿಕೊಂಡು ಬಂದನು
ಅಮ್ಮ ಇದಕೆ ಹಣವ ಕೊಟ್ಟು
ಕೊಂಡು ಕೊಂಡಳು!
ಕತ್ತಿ, ಚೂರಿ, ಸೌಟಿಗೆಲ್ಲ
ಇದುವೆ ನೋಡು ಕಬ್ಬಿಣ!
ನಮಗೆ ಬೇಕು ಕಬ್ಬಿಣ!

—ಎಂ. ಆರ್. ಭಟ್ಟ, ಪೆರಡಾಲ

## ಮುಗಿಲು

★

ವಾಯುಪುತ್ರಿ, ಹೇ ಮುಗಿಲೇ!
ನೂರುಮೊಗವ ಪಡೆದವಳೆ!
ಚಂಚಲಾಂಗಿ, ಗಗನ ಗಮನೆ
ರೆಕ್ಕೆವಡೆದ ನೀಲ ಶಿಲೆ!

ವಜ್ರಮುಷ್ಟಿಯಿಂದ ವರುಣ
ದೇವನನ್ನು ಹದಗೊಳಿಸಿ
ಕಂಗಳಿಂದ ಕಿಡಿಯುದುರಿಸಿ
ಕಣ್ಣನೀರ ಸರಿ ಸುರಿಸಿ

ರವಿಯ ಮಾನ ಭಂಗಗೊಳಿಸಿ
ಭುವಿಯ ತಾಪವನ್ನಿಳಿಸಿ
ನಗ್ನೆ ಭೂಮಿದೇವಿಗೊಂದು
ಹಸುರು ಪಟ್ಟೆಯನ್ನುಡಿಸಿ

ಮನೋವೇಗದಿಂದ ವಿಶ್ವ
ವನ್ನೆ ಕ್ಷಣದಿ ಸಂಚರಿಸಿ
ದಾಹಗೊಂಡು ಸಾಗರಗಳ
ನಾಪೋಶಿಸಿ, ತನು ತಣಿಸಿ

ಇದ್ದುದೆಲ್ಲ ಲೋಕಕಾಗಿ
ದಾನವೆರೆದೆ ತ್ಯಾಗಮಯಿ!
ತನು ಸವೆಯಿಸಿ - ಜಗದ ಏಳ್ಗೆ
ಗಾಗಿ ದುಡಿವೆ - ಚಿನ್ಮಯಿ!!

—ನೀಲಾಂಗ, ಪುತ್ತೂರು




ಬ್ರಹ್ಮದತ್ತನು ಕಾಶಿರಾಜ್ಯವನ್ನು ಆಳುತ್ತಿದ್ದ ಕಾಲದಲ್ಲಿ ಬೋಧಿಸತ್ವನು ಒಬ್ಬ ಬ್ರಾಹ್ಮಣನ ಮಗನಾಗಿ ಜನಿಸಿದನು. ಆತನು ತೀರಾ ಕುಳ್ಳನಾಗಿದ್ದುದರಿಂದ ಎಲ್ಲರೂ ಆತನನ್ನು ಗಿಡ್ಡ ಅಂತ ಕರೆಯುತ್ತಿದ್ದರು.

ಆತನು ತೀರಾ ಸಣ್ಣವನಾಗಿರುವಾಗಲೇ ತಕ್ಷಶಿಲೆಗೆ ಹೋಗಿ ಧನುರ್ವಿದ್ಯೆಯನ್ನು ಕಲಿತು ಆ ವಿದ್ಯೆಯಲ್ಲಿ ಪ್ರವೀಣನೆನ್ನಿಸಿಕೊಂಡನು.

ಆ ತರುವಾಯ ಗಿಡ್ಡನಿಗೆ ಧನುರ್ವಿದ್ಯೆಯಿಂದಲೇ ಹೊಟ್ಟೆಯಪಾಡು ನೀಗಿಕೊಳ್ಳಬೇಕೆಂಬ ಅಭಿಲಾಷೆಯುಂಟಾಯಿತು. ಆ ಕಾರಣದಿಂದಾಗಿ ಆತನು ಅನೇಕ ದೇಶಗಳಲ್ಲಿ ಸಂಚರಿಸಿ ಎಷ್ಟೋ ಜನ ರಾಜ ಮಹರಾಜರನ್ನು ಕಂಡು, ತಾನು ಬಿಲ್ಲುವಿದ್ಯೆಯಲ್ಲಿ ಪ್ರವೀಣನೆಂದೂ ತನಗೆ ಆಸ್ಥಾನದಲ್ಲಿ ಒಂದು ನೌಕರಿ ಕೊಡಬೇಕೆಂದೂ ಪ್ರಾರ್ಥಿಸಿದನು.

ಆದರೆ ಆತನ ಗಿಡ್ಡಗಾದ ಆಕಾರವನ್ನು ನೋಡಿ ಯಾವ ರಾಜನೂ ಆತನಿಗೆ ನೌಕರಿಯನ್ನು ಕೊಡಲು ಮನಸ್ಸುಮಾಡಲಿಲ್ಲ.

ಉದ್ಯೋಗ ಸಂಪಾದಿಸುವ ವಿಧಾನ ಮತ್ತು ತನ್ನ ಕೌಶಲ್ಯವನ್ನು ತೋರುವ ರೀತಿ ತಿಳಿಯದೆ ಆತನು ತುಂಬಾ ಚಿಂತೆಗೀಡಾದ. ಒಂದು ದಿನ ಗಿಡ್ಡನು ಒಂದು ಗ್ರಾಮದ ನೇಕಾರರ ರಸ್ತೆಯಲ್ಲಿ ಹೋಗುತ್ತಿರಲು ಆತನಿಗೊಬ್ಬ ಆಜಾನುಬಾಹು ಮಗ್ಗದಮುಂದೆ ಕುಳಿತು ಕೆಲಸ ಮಾಡುತ್ತಿದ್ದುದು ಕಾಣಿಸಿತು. ಗಿಡ್ಡನು ಏನೋ ಆಶೆಯಿಟ್ಟುಕೊಂಡು ಅವನನ್ನು ಸಮೀಪಿಸಿ "ನಿನ್ನ ಹೆಸರೇನು?" ಎಂದು ಕೇಳಿದನು.

"ನನ್ನ ಹೆಸರು ಭೀಮಸೇನ" ಎಂದ ನೇಕಾರ.

"ಎಂತಹ ಕಟ್ಟುಮಸ್ತಾದ ಆಳು; ಎಂತಹ ಭಾರಿ ಹೆಸರು! ಆನೆಯಂಥ ಮಹಾಕಾಯನಾದ ನಿಮಗೆ ನೇಯ್ಗೆ ಕೆಲಸ ಮಾಡುವ ಕರ್ಮವೇನು ಬಂತಪ್ಪಾ?" ಎಂದು ಗಿಡ್ಡ ಅವನನ್ನು ಮೂದಲಿಸಿದ.

"ನಾನೇನು ಮಾಡಲಿ? ಬಟ್ಟೆ ನೇಯುವುದು ಹೊರತು ನನಗೆ ಬೇರೆ ಯಾವ ಕೆಲಸವೂ ಬಾರದು" ಎಂದ ಭೀಮಸೇನ.





"ಓಹೋ! ಹಾಗಾದರೆ ನನ್ನ ಮಾತು ಕೇಳು. ಕೈ ತುಂಬ ಹಣ ಸಂಪಾದಿಸುವ ಉಪಾಯ ಹೇಳುವೆನು. ನನ್ನ ಸಂಗಡ ಬರುವೆಯಾ?" ಎಂದು ಕೇಳಿದ ಗಿಡ್ಡ.

ಭೀಮಸೇನನು ಸಂತೋಷದಿಂದ ಒಪ್ಪಿಕೊಂಡು ಗಿಡ್ಡನೊಂದಿಗೆ ಹೊರಟ. ಇಬ್ಬರೂ ಪ್ರಯಾಣಮಾಡುತ್ತಾ ಕಾಶಿರಾಜ್ಯವನ್ನು ಸೇರಿಕೊಂಡರು.

"ನೀನು ಮಹಾರಾಜರಬಳಿಗೆ ಹೋಗಿ ಬಿಲ್ಲುವಿದ್ಯೆಯಲ್ಲಿ ಪ್ರವೀಣನೆಂದು ಹೇಳಿ, ನೌಕರಿ ಕೊಡುವಂತೆ ಪ್ರಾರ್ಥಿಸು. ನಿನ್ನ ಆಕೃತಿಯನ್ನು ನೋಡಿದಕೂಡಲೇ ನೌಕರಿ ಕೊಡುತ್ತಾರೆ" ಎಂದು ಗಿಡ್ಡನು ಭೀಮಸೇನನಿಗೆ ಉಪಾಯ ಹೇಳಿದ.

"ನನಗೆ ಬಿಲ್ಲುವಿದ್ಯೆ ಬಾರದಲ್ಲಾ" ಎಂದ ಭೀಮಸೇನ.

"ನಿನಗೆ ಬರದಿದ್ದರೆ ಬೇಡ. ನನಗೆ ಆ ವಿದ್ಯೆ ಚೆನ್ನಾಗಿ ಬರುತ್ತದೆ. ಆ ಕುರಿತು ನೀನೇನೂ ಸಂಶಯ ತಾಳಬೇಡ. ನಾನು ನಿನ್ನ ಭಂಟನಾಗಿ ಕೆಲಸ ಮಾಡುವೆನು. ಅಗತ್ಯವಾದಾಗಲೆಲ್ಲಾ ನಿನಗೆ ನಾನೇ ಸಹಾಯ ಮಾಡುವೆನು" ಎಂದು ಗಿಡ್ಡ ಧೈರ್ಯ ಹೇಳಿದ.

ಅದೇಪ್ರಕಾರ ಭೀಮಸೇನನು ಕಾಶಿರಾಜನ ಮುಂದೆ ಹೋಗಿ ತಾನು ಪ್ರಚಂಡ ಬಿಲ್ಲುಗಾರನೆಂದು ಹೇಳಿ, ಆಸ್ಥಾನದಲ್ಲಿ ಒಂದು ನೌಕರಿಯನ್ನು ಸಂಪಾದಿಸಿದನು. ಅವನಿಗೆ ಈ ಕೆಲಸಕ್ಕೆ ದೊಡ್ಡ ಸಂಬಳ; ಒಂದುಪಕ್ಷಕ್ಕೆ ಸಾವಿರ ರೂಪಾಯಿಯಾಗಿತ್ತು. ಗಿಡ್ಡ ಅವನ ಊಳಿಗದವನಾಗಿ ಸೇರಿಕೊಂಡ.

ಇಬ್ಬರೂ ಒಂದೇಕಡೆ ಸುಖವಾಗಿ ಜೀವಿಸುತ್ತಿದ್ದರು. ಹೀಗಿರಲು ಕಾಶಿ ಪ್ರಜೆಗಳಿಗೆ ಒಂದು ವಿಪತ್ತು ಸಂಭವಿಸಿತು. ಕಾಶಿನಗರಕ್ಕೆ ಸಮೀಪದಲ್ಲಿದ್ದ ಒಂದು ಅಡವಿಯಲ್ಲಿದ್ದ ಭಾರಿ ಹುಲಿಯೊಂದು ರಾಜಮಾರ್ಗದಲ್ಲಿ ಹೊಂಚಿಕುಳಿತು ದಾರಿಯಲ್ಲಿ ಹೋಗಿ ಬರುವ ಜನರನ್ನು ಕೊಲ್ಲಲಾರಂಭಿಸಿತು. ಈ ವಿಷಯ ತಿಳಿದ ತಕ್ಷಣ ರಾಜನು ಭೀಮಸೇನನ್ನು ಕರೆಯ ಕಳುಹಿಸಿ, ಆ ಹುಲಿಯನ್ನು ಕೊಲ್ಲುವಂತೆ ಅವನಿಗೆ ಆಜ್ಞೆ ಮಾಡಿದನು.

ಭೀಮಸೇನನು ರಾಜಾಜ್ಞೆಯನ್ನು ಶಿರಸಾವಹಿಸಿ, ಆತನಿಂದ ಅಪ್ಪಣೆ ಪಡೆದು, ಗಿಡ್ಡನಬಳಿಗೆ



ಬಂದು "ನೋಡಿದೆಯಾ, ನಾನೆಂತಹ ಸಂದಿಗ್ಧದಲ್ಲಿ ಸಿಲುಕಿರುವೆನೋ? ಹುಲಿಯನ್ನು ನಾನು ಹೇಗೆ ಕೊಲ್ಲಲಿ? ಈ ಗಂಡಾಂತರದಿಂದ ಪಾರಾಗುವಬಗೆ ಹೇಗೆ?" ಎಂದು ಹಲುಬಿದನು.

"ನಾನು ಹೇಳಿದಂತೆ ಕೇಳು. ಹುಲಿಯನ್ನು ನೀನೊಬ್ಬನೇ ಕೊಲ್ಲಲಾರೆ. ಊರಾಚೆ ಬಂದ ಕೂಡಲೇ ಎರಡು ಸಾವಿರ ಜನ ಹಳ್ಳಿಗರನ್ನು ಜೊತೆಮಾಡಿಕೊಂಡು ಹುಲಿ ಹೊಂಚುಹಾಕುವ ಸ್ಥಳಕ್ಕೆ ಹೋಗು. ಹುಲಿಯ ಆರ್ಭಟ ಕೇಳಿದ ಕೂಡಲೇ ನೀನು ಯಾವುದಾದರೂ ಪೊದೆಯಲ್ಲಿ ಅಡಗಿಕೊ. ನಿನ್ನೊಂದಿಗೆ ಬಂದ ಜನ ಹುಲಿಯನ್ನು ಕೊಂದುಬಿಡುತ್ತಾರೆ. ಹುಲಿ ಸಾಯುವವರೆವಿಗೂ ಸುಮ್ಮನಿದ್ದು, ಅನಂತರ ಒಂದು ಬಳ್ಳಿಯನ್ನು ಕಿತ್ತುಕೊಂಡು ಹೊರಗೆ ಬಾ. ಸತ್ತು ಬಿದ್ದಿರುವ ಹುಲಿಯನ್ನು ಕಂಡು, ಕೋಪವನ್ನು ನಟಿಸಿ "ಇದನ್ನು ಈ ಬಳ್ಳಿಯಿಂದ ಕಟ್ಟಿಹಾಕಿ ರಾಜನಿಗೊಪ್ಪಿಸಲೆಣಿಸಿದ್ದೆ: ನನ್ನ ಚಾತುರ್ಯವನ್ನು ತೋರಿಸಬೇಕೆಂದಿದ್ದೆ. ಅದನ್ನು ಕೊಲ್ಲಬೇಕೆಂದರೆ ನಿಮ್ಮ ಅವಶ್ಯಕತೆ ಏನಿತ್ತು? ನಾನೊಬ್ಬ ಸಾಕಾಗುತ್ತಿರಲಿಲ್ಲವೇ? ಈ ಹುಲಿಯನ್ನು ಕೊಂದವರು ಯಾರೋ ಹೇಳಿ, ಅವರ ಶಿರಚ್ಛೇದವನ್ನು ಮಾಡಿಸುವೆನು. ಎಂದು ರೇಗಾಡು. ಜನರು ಅವನ ಆಟಾಟೋಪ ನೋಡಿ ಹೆದರಿಕೊಂಡು 'ನಾವಲ್ಲ ಸ್ವಾಮಿ, ನಾವಲ್ಲ' ಎಂದು ಹೇಳಿ ಹಿಂದೆ ಸರಿಯುವರು. ಆಗ ನೀನು ಮಹಾರಾಜರ ಬಳಿಗೆ ಹೋಗಿ ಹುಲಿಯನ್ನು ನೀನೇ ಕೊಂದೆಯೆಂದು ಹೇಳಬಹುದು. ಪ್ರತಿ ಹೇಳುವ ಸಾಹಸ ಯಾರೂ ಮಾಡಲಾ



ರರು" ಎಂದು ಗಿಡ್ಡನು ಭೀಮಸೇನನಿಗೆ ಉಪಾಯ ಹೇಳಿಕೊಟ್ಟನು.

ಭೀಮಸೇನನು ಗಿಡ್ಡನು ಹೇಳಿದಂತೆ ಅಕ್ಷರಶಃ ಮಾಡಿದ. ಹುಲಿಯನ್ನು ಗ್ರಾಮಸ್ಥರೆಲ್ಲರೂ ಸೇರಿ ಕೊಲ್ಲುತ್ತಿದ್ದರೆ ಭೀಮಸೇನನು ಪೊದೆಯಲ್ಲಿ ಅವಿತಿದ್ದು, ಅದು ಸತ್ತನಂತರ ಒಂದು ಕೈಯಲ್ಲಿ ಬಳ್ಳಿಯೊಂದನ್ನು ಹಿಡಿದುಕೊಂಡು ಹೊರಗೆ ಬಂದು, ತಾನಿಲ್ಲದ ಸಮಯದಲ್ಲಿ ಹುಲಿಯನ್ನು ಕೊಂದುದಕ್ಕೆ ಗ್ರಾಮಸ್ಥರಮೇಲೆ ಹಾರಿಬಿದ್ದ. ಅದನ್ನು ಕೊಂದವರ ತಲೆ ಹಾರುವುದೆಂದು ಹೆದರಿಸಿದ. ಗ್ರಾಮಸ್ಥರೆಲ್ಲರೂ ಹೆದರಿ ಮೆಲ್ಲನೆ ಅಲ್ಲಿಂದ ಜಾರಿಕೊಂಡರು.

ತರುವಾಯ ಭೀಮಸೇನನು ನಗರಕ್ಕೆ ಹಿಂತಿರುಗಿ, ರಾಜನನ್ನು ಸಂದರ್ಶಿಸಿ "ಮಹಾಪ್ರಭು, ಹುಲಿಯನ್ನು ಕೊಂದೆ. ಇನ್ನು ಪ್ರಜೆಗಳಿಗೆ ಯಾವ ಭಯವೂ ಇರಲಾರದು" ಎಂದು ಮನವಿ ಮಾಡಿಕೊಂಡನು.

ರಾಜನು ಭೀಮಸೇನನ ಪರಾಕ್ರಮವನ್ನು ಕೊಂಡಾಡಿದನು. ಭೀಮಸೇನನ ಖ್ಯಾತಿ ಇಮ್ಮಡಿಸಿತು. ಎಲ್ಲರೂ ಅವನನ್ನು ಪ್ರಶಂಸಿಸ ತೊಡಗಿದರು. ಈ ಪ್ರಶಂಸೆಗಳನ್ನು ಕೇಳಿ ಭೀಮಸೇನನು ತಾನು ನಿಜವಾಗಿ ಮಹಾವೀರನೆಂದು ಭಾವಿಸಿ, ತನ್ನ ಭಂಟನಾದ ಗಿಡ್ಡನನ್ನು ತಿರಸ್ಕಾರದಿಂದ ಕಾಣಲು ಪ್ರಾರಂಭಿಸಿದನು.

ಈ ವಿಷಯ ಗಿಡ್ಡನು ಗ್ರಹಿಸಿದನಾದರೂ ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ. ಹೀಗಿರಲು ಕಾಶಿರಾಜ್ಯದ ಮೇಲೆ ಒಬ್ಬ ಶತ್ರು ರಾಜನು ದಂಡೆತ್ತಿ ಬಂದು, ನಗರವನ್ನು ತನ್ನ ಸೈನ್ಯ



ದಿಂದ ಸುತ್ತುಗಟ್ಟಿ "ಶರಣಾಗತರಾಗುವಿರಾ, ಇಲ್ಲ ಯುದ್ಧಕ್ಕೆ ಸಿದ್ಧರಾಗುವಿರಾ?" ಎಂದು ದೂತರನ್ನು ಕಳುಹಿಸಿದನು. ರಾಜನು ಭೀಮ ಸೇನನಿಗೆ ಹೇಳಿ ಕಳುಹಿಸಿ "ನಿನಗೆ ಅವ ಶ್ಯಕವಾದಷ್ಟು ಸೈನ್ಯವನ್ನು ಸಂಗಡ ಕರೆದು ಕೊಂಡು ಹೋಗಿ ಶತ್ರು ಸೈನ್ಯವನ್ನು ನಾಶ ಮಾಡಿ ಬಾ" ಎಂದು ಆಜ್ಞಾಪಿಸಿದನು. ಅವನಿಗೆ ಕವಚ ತೊಡಿಸಿ, ಬಿಲ್ಲು ಬಾಣಗಳನ್ನು ಕೈಗೆ ಕೊಟ್ಟು, ಒಂದು ಆನೆಯಮೇಲೆ ಕೂರಿಸಿ, ಯುದ್ಧರಂಗಕ್ಕೆ ಕಳುಹಿಸಿದರು. ಭೀಮಸೇನನು ಆಪತ್ತಿಗೆ ಗುರಿಯಾಗುವನೆಂದು ಗಿಡ್ಡನಿಗೆ ಈ ಮೊದಲೇ ತಿಳಿದಿತ್ತು. ಅಂತಲೇ ಅವನು ಸಹ ಬಿಲ್ಲುಬಾಣಗಳನ್ನು ಧರಿಸಿ, ಭೀಮಸೇನನ ಹಿಂದೆ ಆನೆಯಮೇಲೆ ಕುಳಿತುಕೊಂಡನು. ಸುತ್ತಲು ಅಶ್ವದಳ ಪದಾತಿದಳಗಳು ನಡೆಯುತ್ತಿರಲು ಆನೆ ನೆಟ್ಟಗೆ ಯುದ್ಧ ಭೂಮಿಗೆ ಹೊರಟಿತು.

ಶತ್ರು ಸೈನ್ಯ ಸಾಲುಸಾಲಾಗಿ ನಿಂತಿರುವು ದನ್ನು ಕಂಡಕೂಡಲೇ ಭೀಮಸೇನನು ಗಡಗಡ ನಡುಗತೊಡಗಿದನು. ಮೈಯೆಲ್ಲಾ ಬೆವರಿತು. ಅವನು ಮೆಲ್ಲನೆ ಆನೆಯಿಂದ ಕೆಳಗಿಳಿದು ಓಡಿ ಹೋಗಲು ಸಿದ್ಧನಾಗುತ್ತಿದ್ದನು. ಅದನ್ನು ಗ್ರಹಿ ಸಿದ ಗಿಡ್ಡನು ಅವನನ್ನು ಆನೆಗೆ ಕಟ್ಟಿಹಾಕಿದನು. ಇಲ್ಲದಿದ್ದರೆ ಆ ಗಲಾಟೆಯಲ್ಲಿ ಭೀಮಸೇನನು ಕುದುರೆಗಳ ನಡುವೆ ಸಿಕ್ಕಿ ಜಜ್ಜಿ ಪರಲೋಕ ವನ್ನು ಸೇರುತ್ತಿದ್ದನು.

ಇಷ್ಟಾದನಂತರ ಗಿಡ್ಡನು ತಾನೇ ನಾಯ ಕತ್ವ ವಹಿಸಿಕೊಂಡು, ಆನೆಯನ್ನು ಜಬರಿಸಿ, ಬಿರುಗಾಳಿಯಂತೆ ಶತ್ರು ಸೈನ್ಯದ ಮಧ್ಯೆ ನುಗ್ಗಿಸಿ, ಶತ್ರುಗಳಮೇಲೆ ಬಾಣಗಳ ಸುರಿಮಳೆ ಸುರಿ ಸಿದನು. ಅತಿ ಸುಲಭವಾಗಿ ಶತ್ರು ರಾಜನನ್ನು ಸಮೀಪಿಸಿದನು.

ಕೊಂಚಹೊತ್ತಿಗೆ ಆತನ ಬಾಣಗಳ ಪರಂ ಪರೆಗೆ ಶತ್ರು ಸೇನೆ ಓಡಿತು. ಶತ್ರು ರಾಜನು ಗಾಯಹೊಂದಿ, ಪರಾಜಯ ಪಡೆದು ಗಿಡ್ಡನ ಸೆರೆಯಾಳಾದನು.

ಗಿಡ್ಡನು ಯುದ್ಧರಂಗದಿಂದ ವಿಜಯಗಳಿಸಿ ಹಿಂತಿರುಗಿ ಬಂದನಂತರ ರಾಜನಿಗೆ ಯಥಾರ್ಥ ತಿಳಿಯಿತು. ಆತನು ಗಿಡ್ಡನನ್ನು ತನ್ನ ಸೇನಾ ನಾಯಕನನ್ನಾಗಿ ನೇಮಿಸಿದನು. ಗಿಡ್ಡನು ಭೀಮ ಸೇನನಿಗೆ ಯಥೇಚ್ಛ ಹಣ ಕೊಟ್ಟು ಕಳುಹಿಸಿದನು.






ಹಿಂದೆ ಅವಂತಿನಗರದಲ್ಲಿ ಇಳಿವಯಸ್ಸಿನ ವರ್ತಕನಿದ್ದನು. ಅವನು ಹರೆಯದಲ್ಲಿದ್ದಾಗ ಅನೇಕ ದೇಶಗಳಲ್ಲಿ ಸಂಚರಿಸಿ, ಭಾರಿ ವ್ಯಾಪಾರ ಮಾಡಿ, ಅಪಾರ ಹಣ ಗಳಿಸಿದ್ದನು. ಕಾಲ ಕ್ರಮೇಣ ಆತನಿಗೆ ವಯಸ್ಸಾಯಿತು. ಮುದುಕನಾಗಲು ತನ್ನ ವ್ಯಾಪಾರವನ್ನು ಮಕ್ಕಳ ಕೈಗೊಪ್ಪಿಸಲು ನಿಶ್ಚಯಿಸಿದನು.

ಆದರೆ ಅವನ ಮೂವರು ಗಂಡು ಮಕ್ಕಳಲ್ಲಿ ಹಿರಿಯವರಾದ ಜೀವದತ್ತ, ಲಕ್ಷದತ್ತರು ಯಾವ ಕೆಲಸಕ್ಕೂ ಒದಗದ ಶುದ್ಧ ಶುಂಠರು. ಇದೂ ಅಲ್ಲದೆ ಅನೇಕ ದುರಭ್ಯಾಸಗಳಿಗೆ ವಶವಾಗಿದ್ದರು. ಮನೆಯಲ್ಲಿ ಕ್ಷಣವಾದರೂ ನಿಲ್ಲುತ್ತಿರಲಿಲ್ಲ. ಮೂರನೇಯವನಾದ ಪಿಂಗಳನಿಗೆ ಇನ್ನೂ ಇಪ್ಪತ್ತು ವರ್ಷ ತುಂಬಿರಲಿಲ್ಲ.

ವರ್ತಕನು ಈ ಚಿಂತೆಯಿಂದಲೇ ಹಾಸಿಗೆ ಹಿಡಿದನು. ಸಾಯುವ ಮುನ್ನ ತನ್ನ ಯಾವತ್ತೂ ಆಸ್ತಿಯನ್ನು ಮೂವರು ಮಕ್ಕಳಿಗೂ, ತನ್ನ ಹೆಂಡತಿಗೂ ಸಮಭಾಗವಾಗಿ ಹಂಚಿಕೊಟ್ಟನು. ತಂದೆ ಮರಣಿಸಿದ ಕೂಡಲೇ ಹಿರಿಯರಾದ ಜೀವದತ್ತ, ಲಕ್ಷದತ್ತರು ತಮ್ಮ ಪಾಲಿಗೆ ಬಂದ ಆಸ್ತಿಯನ್ನು ಪೋಲುಮಾಡಲು ಆರಂಭಿಸಿದರು. ತನ್ನ ಹಿರಿಯ ಮಕ್ಕಳು ನಿಷ್ಪ್ರಯೋಜಕರೆಂದು ಗ್ರಹಿಸಿದ ತಾಯಿ ತನ್ನ ಪಾಲಿಗೆ ಬಂದ ಆಸ್ತಿಯೊಂದಿಗೆ ಕಿರಿಯ ಮಗನಾದ ಪಿಂಗಳನ ಮನೆಗೆ ಹೋಗಿ ಅಲ್ಲೇ ವಾಸಿಸುತ್ತಿದ್ದಳು.

ಜೀವದತ್ತ, ಲಕ್ಷದತ್ತರು ತಮ್ಮ ಬಳಿಯಿದ್ದ ಹಣವೆಲ್ಲಾ ಮುಗಿದಕೂಡಲೇ ತಾಯಿಯನ್ನು ಹುಡುಕಿಕೊಂಡು ಪಿಂಗಳನ ಮನೆಗೆ ಬಂದರು. ಪಿಂಗಳನು ತನ್ನ ಸಹೋದರರನ್ನು ಆದರದಿಂದ ಬರಮಾಡಿಕೊಂಡನು. ಆದರೆ ಅವರಿಬ್ಬರೂ ಪಿಂಗಳನನ್ನು ಗದರಿಕೊಂಡು ನೆಟ್ಟಗೆ ತಾಯಿಯ ಬಳಿಗೆ ಹೋದರು. ಮತ್ತು ಅವಳನ್ನು ತಮ್ಮ



ವಾಗಿ ತೋರುವುದು" ಎಂದಳು. ಇದನ್ನು ಕೇಳಿ ಹಿರಿಯರಿಬ್ಬರೂ ಉರಿದುಬಿದ್ದು "ಸರಿ, ನೀನು ಅವನ ಬಳಿಯಲ್ಲೇ ಇರು. ನಮ್ಮ ಅಭ್ಯಂತರವೇನಿಲ್ಲ. ಆದರೆ ನಮ್ಮ ತಂದೆ ನಿನ್ನ ಹೆಸರಿಗೆ ಬಿಟ್ಟುಹೋದ ಆಸ್ತಿಯಲ್ಲಿ ನಮ್ಮ ಭಾಗ ನಮಗೆ ಕೊಡು" ಎಂದರು.

"ಎಲಾ, ಇದೆಂತಹ ನ್ಯಾಯ? ನಾನು ಜೀವಿಸಿರುವಾಗ ನಿಮಗೆ ಭಾಗ ಹೇಗೆ ಬರುತ್ತದೆ" ವಿಸ್ಮಿತಳಾಗಿ ನುಡಿದಳು.

"ಆ ಭಾಗ ಈಗಲ್ಲದಿದ್ದರೆ ಮುಂದೆ ನಮಗೆ ದಕ್ಕುವ ಭರವಸೆಯಿಲ್ಲ. ಪಿಂಗಳನು ಆ ಹಣವನ್ನು ಲಪಟಾಯಿಸಿ, ನಿನಗೆ ಅನ್ನ ನೀರಿಗೂ ದೋಕಾ ಹಾಕಿದರೆ ನಮ್ಮ ಗತಿ ಏನಾಗಬೇಕು?" ಎಂದು ಕೇಳಿದರು ಹಿರಿಯರಿಬ್ಬರು.

ಮನೆಗೆ ಬರಬೇಕೆಂದು ಕೋರಿದರು. ತಾನೆಂದರೆ ತುಸವಾದರೂ ಪ್ರೀತಿ ಗೌರವಗಳಿಲ್ಲದ ಹಿರಿಯ ಮಕ್ಕಳು, ತನ್ನನ್ನು ಅವರ ಮನೆಗೆ ಬರುವಂತೆ ಒತ್ತಾಯಪಡಿಸುತ್ತಿರುವುದರ ಅರ್ಥವನ್ನು ಆಕೆ ಗ್ರಹಿಸಿದಳು. ಗಂಡನು ತನ್ನ ಪಾಲಿಗೆ ಬಿಟ್ಟುಹೋದ ಹಣಕ್ಕಾಗಿಯೇ ಅವರು ತನ್ನ ಮೇಲೆ ತೋರಿಕೆಯ ಪ್ರೀತಿ ತೋರಿಸುತ್ತಿರುವರೆಂದು ಆಕೆಗೆ ಗೊತ್ತು.

ಅಂತಲೇ ಆಕೆ ತನ್ನ ಹಿರಿಯ ಮಕ್ಕಳೊಂದಿಗೆ "ನೀವಿಬ್ಬರೂ ಹಿರಿಯರು. ಜವಾಬ್ದಾರಿ ತಿಳಿದವರು. ನಿಮ್ಮ ಬಾಳನ್ನು ಸಾಗಿಸಲು ನಿಮಗೆ ಚೈತನ್ಯವಿದೆ. ಪಿಂಗಳನ ವಿಷಯ ಹಾಗಲ್ಲ. ಅವನಿನ್ನೂ ಚಿಕ್ಕವನು. ಆದರಿಂದ ನಾನು ಅವನ ಬಳಿಯಿರುವುದೇ ನನಗೆ ಸೂಕ್ತ

ಅಣ್ಣಂದಿರ ಧೋರಣೆ ನೋಡಿ ಪಿಂಗಳನಿಗೆ ಬಹಳ ಅವಮಾನವಾಯಿತು. ಅವನು ತಟ್ಟನೆದ್ದು ತಾಯಿಯ ಬಳಿಗೆ ಬಂದು "ಅಮ್ಮಾ, ನಿನಗಿಷ್ಟವಾದರೆ ಅಣ್ಣಂದಿರ ಹತ್ತಿರ ಹೋಗು. ನಿನ್ನ ಆಸ್ತಿಯಲ್ಲಿ ನನಗೆ ಒಂದು ಚಿಕ್ಕಾಸೂ ಬೇಡ" ಎಂದ.

ತಾಯಿ ಈ ವ್ಯವಸ್ಥೆಗೆ ಅಂಗೀಕರಿಸಲಿಲ್ಲ. ಆಗ ಹಿರಿಯ ಮಕ್ಕಳಿಬ್ಬರಿಗೂ ಬಹಳ ಕೋಪ ಬಂತು. ಕೋಲು ತೆಗೆದುಕೊಂಡು ತಾಯಿಯನ್ನು ಬಡಿಯಲಾರಂಭಿಸಿದರು. ಈ ಘೋರವನ್ನು ಸಹಿಸಲಾರದೆ ಪಿಂಗಳ ಅಡ್ಡಬಂದ. ಅದನ್ನು ಕಂಡು ಅವರ ಕೋಪ ಮಿತಿಮೀರಿತು. ಅವನನ್ನೂ ಚೆನ್ನಾಗಿ ಚಚ್ಚಿದರು.







ತಾಯಿ ಉಪಾಯವಾಗಿ ಮನೆಯಿಂದ ಹೊರ ಬಿದ್ದು ನೆರೆ ಹೊರೆಯುವರನ್ನು ಕರೆದುಕೊಂಡು ಬಂದಳು. ಅವರು ಬಂದು ಜಗಳವನ್ನು ಬಿಡಿಸಿ ಜೀವದತ್ತ, ಲಕ್ಷವತ್ತರಿಗೆ ಛೀಮಾರಿ ಹಾಕಿದರು. ಅವರಿಬ್ಬರೂ ಕಾಲನ್ನು ನೆಲಕ್ಕೆ ಅಪ್ಪಳಿಸಿ, "ನಾವೇನೂ ಪ್ರಪಂಚಜ್ಞಾನವಿಲ್ಲದ ಮೂಢರಲ್ಲ. ನಿಮ್ಮಿಬ್ಬರನ್ನೂ ನ್ಯಾಯಸ್ಥಾನಕ್ಕೆ ಎಳೆಯುತ್ತೇವೆ. ಆಸ್ತಿ ಎಲ್ಲಿಗೆ ಹೋಗುವುದೋ ನೋಡೋಣ" ಎಂದರು.




ಒಂದು ವಾರ ಕಳೆಯುವುದರೊಳಗೆ ಜೀವದತ್ತ, ಲಕ್ಷದತ್ತರು ತಮ್ಮ ಮಾತಿನಂತೆ ನಡೆದೇ ಬಿಟ್ಟರು. ಅವರು ನ್ಯಾಯಾಸ್ಥಾನದಲ್ಲಿ ತಾಯಿ ಮತ್ತು ತಮ್ಮನ ಮೇಲೆ ಫಿರ್ಯಾದು ಹೂಡಿದರು. ಪಿಂಗಳ ಮತ್ತು ಅವನ ತಾಯಿಗೆ ನ್ಯಾಯಸ್ಥಾನದಿಂದ ಕರೆ ಬಂತು.

ಅವರು ನ್ಯಾಯಸ್ಥಾನಕ್ಕೆ ಹೋದರು. ನ್ಯಾಯಾಧೀಶ ಒಳ್ಳೆಯವನಾಗಿರಲಿಲ್ಲ; ಸ್ವಾರ್ಥಿ. ಹಿರಿಯುವರಿಬ್ಬರಿಂದಲೂ ಲಂಚ ಪಡೆದಿದ್ದನಾದುದರಿಂದ ತಾಯಿ ಮತ್ತು ಮಗನಿಗೆ ವ್ಯತಿರಿಕ್ತವಾಗಿ ತೀರ್ಪುಕೊಟ್ಟನು.

ಪಿಂಗಳನು ತನಗೂ, ತನ್ನ ಮಾತೆಗೂ ಅನ್ಯಾಯವಾಯಿತೆಂದು ಮೇಲಿನ ನ್ಯಾಯಾಸ್ಥಾನಕ್ಕೆ ಅರ್ಜಿ ಹಾಕಿಕೊಂಡನು. ಸುಮಾರು ಒಂದು ತಿಂಗಳು ನ್ಯಾಯಾಸ್ಥಾನಕ್ಕೆ ಓಡಾಡಿಸಿ, ನ್ಯಾಯಾಧಿಪತಿ ಪಿಂಗಳನಿಗೆ ಅನುಕೂಲವಾಗಿ ತೀರ್ಪುಕೊಟ್ಟನು. ಆದರೇನು? ತೀರ್ಪು ಅನುಕೂಲವಾಗಿ ಆದರೂ ಮಧ್ಯವರ್ತಿಗಳೆನ್ನಿಸಿಕೊಂಡ ಜನಕ್ಕೆ ವಿಪರೀತವಾಗಿ ಖರ್ಚು ಮಾಡಿದ್ದುದರಿಂದ ಪಿಂಗಳ ಮತ್ತು ಅವನ ತಾಯಿ ತಮ್ಮ ಆಸ್ತಿಯನ್ನೆಲ್ಲಾ ಕಳೆದುಕೊಂಡು ಬಿಟ್ಟಿದ್ದರು. ಅತ್ತ ಜೀವದತ್ತ, ಲಕ್ಷದತ್ತರೂ ದರಿದ್ರರಾಗಿಹೋಗಿದ್ದರು. ಅವರಿಬ್ಬರೂ ಹೊಟ್ಟೆ ಹೊರೆದುಕೊಳ್ಳುವ ಮಾರ್ಗವನ್ನೇ ಕಾಣದೆ, ಬೀದಿಯಲ್ಲಿ ಬಿಕ್ಕೆಬೇಡಲಾರಂಭಿಸಿದರು.

ಪಿಂಗಳನು ತನಗೊದಗಿದ ದುರದೃಷ್ಟಕ್ಕೆ ಚಿಂತಿಸುತ್ತಾ ಕೂಡಲಿಲ್ಲ. ಅವನು ತಾಯಿಗೆ ಧೈರ್ಯ ಹೇಳಿ, ಒಂದು ಬಲೆಯನ್ನು ತೆಗೆದುಕೊಂಡು ಮೀನು ಹಿಡಿಯಲು ನದಿಗೆ ಹೋದ. ಬಲೆ ಬೀಸುವ ವೃತ್ತಿಗೆ ಹೊಸಬನಾದರೂ ಪಿಂಗಳನು ಅಂದು ಸಾಯಂಕಾಲದವರೆವಿಗೂ ನದಿಯಲ್ಲಿ ಬಲೆ ಹರಡಿ ಅನೇಕ ಮೀನುಗಳನ್ನು

ಹಿಡಿದ. ಅವುಗಳನ್ನು ಅಂಗಡಿಯಲ್ಲಿ ಮಾರಿ, ಬಂದ ಹಣದಿಂದ ಮನೆಗೆ ಬೇಕಾದ ದಿನಸು ಗಳನ್ನು ಕೊಂಡು ಕೊಂಡ.

ಈ ರೀತಿ ಪಿಂಗಳನು ಹಗಲೆಲ್ಲಾ ಕಷ್ಟಪಟ್ಟು ಮೀನು ಹಿಡಿದು, ಅದನ್ನು ಮಾರಿ ಬಂದ ದುಡ್ಡಿ ನಿಂದ ಸುಖವಾಗಿದ್ದನು. ಕೆಲವು ದಿನಗಳನಂತರ ಈ ವಿಷಯ ಅಣ್ಣಂದಿರಿಬ್ಬರಿಗೂ ತಿಳಿಯಿತು. ಅವರು ಪಿಂಗಳನು ನದಿಗೆ ಹೋಗಿರುವ ಸಮಯ ನೋಡಿ, ತಾವು ಹಸಿವಿನಿಂದ ವಿಲವಿಲ ಒದ್ದಾಡು ತ್ತಿರುವುದಾಗಿ ತಾಯಿಯ ಮುಂದೆ ಗೋಳಿಟ್ಟರು. ಎಷ್ಟಾದರೂ ಹಡೆದ ಮಕ್ಕಳಲ್ಲವೆ? ಅವರ ಹಸಿವೆ ಯನ್ನು ಕಂಡು ತಾಯಿಗೆ ಮಾತೃಪ್ರೇಮ ಉಕ್ಕಿ ಬಂತು. ಹಿಂದೆ ಅವರು ದುರ್ಬುದ್ಧಿಯಿಂದ ತನಗೆ ಅನ್ಯಾಯಮಾಡಿದ್ದನ್ನೂ ಮರೆತು, ಅವರಿಗೆ ಎಲೆ ಹಾಕಿ ಅನ್ನ ಬಡಿಸಿದಳು. ಜೀವದತ್ತ, ಲಕ್ಷ್ಮದತ್ತರು ತಾಯಿಗೆ ಕೃತಜ್ಞತೆಯನ್ನು ತಿಳಿಸಿ, ತಾವು ಹಿಂದೆ ಮಾಡಿದ ಅನ್ಯಾಯಕ್ಕೆ ಪಶ್ಚಾತ್ತಾಪಪಟ್ಟರು. ತಾಯಿಗೂ ಅವರ ಮೇಲೆ ಮರುಕವುಂಟಾಯಿತು. ಪಿಂಗಳನಿಲ್ಲದ ಸಮಯದಲ್ಲಿ ದಿನಾ ಬಂದು ಊಟ ಮಾಡಿ ಕೊಂಡು ಹೋಗುವಂತೆ ಹೇಳಿದಳು. ಕೆಲಸ ಕಾರ್ಯಮಾಡಿ ಗೌರವದಿಂದ ಬಾಳಲು ಅಶಕ್ತ ರಾದ ಜೀವದತ್ತ ಮತ್ತು ಲಕ್ಷ್ಮದತ್ತರು ತಾಯಿ ಹೇಳಿದ ಮಾತಿಗೆ ಸಂತೋಷವ್ಯಕ್ತಪಡಿಸಿದರು.

ಪಿಂಗಳನಿಗೆ ಇದೆಲ್ಲ ತಿಳಿಯದು. ಪ್ರತಿದಿನ ಮುಂಜಾನೆ ಬಲೆ ತೆಗೆದುಕೊಂಡು ನದಿಗೆ ಹೋಗುವನು. ಒಂದು ದಿನ ವೇಕೋ ಅವನೆಷ್ಟು ಪ್ರಯತ್ನಸಿದರೂ ಬಲೆಯಲ್ಲಿ ಒಂದು ಮೀನಾ



ದರೂ ಬೀಳಲಿಲ್ಲ. ಪಿಂಗಳನು ತುಂಬಾ ಹಸನೆಯಿಂದ ಸೂರ್ಯಾಸ್ತಮಯದ ವರೆವಿಗೂ ಪ್ರಯತ್ನಿಸಿ, ಏನೂ ಸಿಕ್ಕದಿರಲು 'ಇಂದು ನಸೀಬು ಏಕೋ ಚೆನ್ನಾಗಿಲ್ಲ' ಎಂದುಕೊಂಡು ಬಲೆಯನ್ನು ಭುಜದಮೇಲೆ ಹಾಕಿಕೊಂಡು ಅಧೋಮುಖನಾಗಿ ಮನೆಕಡೆ ಹೊರಟನು. ಪ್ರತಿದಿನ ವಾಡಿಕೆಯಾಗಿ ಹೋಗುತ್ತಿದ್ದ ಅಂಗಡಿಗೆ ಪಿಂಗಳನು ಹೋಗಲಿಲ್ಲ. ಅಂಗಡಿಗೆ ಬಾರದೆ ಚಿಂತೆಯಿಂದ ಹೋಗುತ್ತಿದ್ದ ಪಿಂಗಳನನ್ನು ಕಂಡು ಆ ವರ್ತಕನು ಅಚ್ಚರಿಗೊಂಡು, ಪಿಂಗಳನ ಹೆಸರು ಹಿಡಿದು ಕರೆದನು.

ಪಿಂಗಳನು ಅಂಗಡಿಯ ಬಳಿಗೆ ಹೋಗಿ ಅಂದು ತನಗೆ ನದಿಯಲ್ಲಿ ಒಂದು ಮೀನೂ ಸಿಕ್ಕಲಿಲ್ಲವೆಂದೂ ಆದ್ದರಿಂದ ತನ್ನ ಬಳಿ ಹಣವಿಲ್ಲವೆಂದೂ ಹೇಳಿದನು. ಅವನ ಮಾತು ಕೇಳಿ ಅಂಗಡಿಯವನು ನಕ್ಕು "ಪ್ರತಿದಿನ ವಸ್ತುಗಳನ್ನು ನನ್ನಿಂದಲೇ ಕೊಂಡುಕೊಂಡು ಹೋಗುವೆ. ಹಾಗಿರಲು ಒಂದು ದಿನ ಹಣ ವಿಲ್ಲದಮಾತ್ರಕ್ಕೆ ಮುಳುಗಿ ಹೋದುದೇನು ? ನಿನಗೆ ಬೇಕಾದ ವಸ್ತುಗಳನ್ನು ತೆಗೆದುಕೊಂಡು ಹೋಗು ; ಹಣ ನಾಳೆ ಕೊಡುವೆಯಂತೆ" ಎಂದ.

ಪಿಂಗಳನು ಅಂಗಡಿಯವನ ಸಹಾನುಭೂತಿಗೆ ತನ್ನ ಕೃತಜ್ಞತೆಯನ್ನು ತಿಳಿಸಿ, ಅಗತ್ಯವಾದ ಸಾಮಾನುಗಳನ್ನು ಮನೆಗೆ ತೆಗೆದುಕೊಂಡು ಹೋದನು. ಇಂದು ಎಂದಿಗಿಂತಲೂ ಸ್ವಲ್ಪ ಹೊತ್ತಿಗೆ ಮುಂಚೆ ಮನೆಗೆ ಬಂದನು. ಆ ಸಮಯದಲ್ಲಿ ಪಿಂಗಳನ ಅಣ್ಣಂದಿರಿಬ್ಬರೂ ಎಲೆ ಮುಂದೆ ಕುಳಿತು ಪಟ್ಟಾಗಿ ಹೊಡೆದು ಊಟ



ಮಾಡುತ್ತಿದ್ದರು. ಹಠಾತ್ತನೆ ಪಿಂಗಳನು ಒಳಗೆ ಬರಲು ಅವರಿಬ್ಬರೂ ಗಾಬರಿಗೊಂಡು, ನಾಚಿಕೆಯಿಂದ ತಲೆ ತಗ್ಗಿಸಿ ಅಲ್ಲಿಂದೆದ್ದು ಹೊರಟು ಹೋಗಲು ಸಿದ್ಧರಾದರು.

ಪಿಂಗಳನು ಅಣ್ಣಂದಿರಿಬ್ಬರನ್ನೂ ಮರ್ಯಾದೆಯಿಂದ ಮಾತನಾಡಿಸಿ "ಸಹೋದರರೇ, ನೀವು ಇದ್ದುದ್ದರಲ್ಲಿ ಹಾಯಾಗಿ ಭುಜಿಸಿ. ಆಗಿದ್ದು ಆಯಿತು. ಎಷ್ಟಾದರೂ ನಾವು ಒಡಹುಟ್ಟಿದವರಲ್ಲವೇ?" ಎಂದ.

ತಮ್ಮನ ಉದಾರತೆಯನ್ನು ಕಂಡು ಅಣ್ಣಂದಿರಿಗೆ ಆನಂದ ಉಂಟಾಯಿತು. ಅವರು ಪಿಂಗಳನ ಔದಾರ್ಯವನ್ನು ಹೊಗಳಿ "ನೀನಿಷ್ಟು ಒಳ್ಳೆಯವನೆಂದು ನಾವು ಭಾವಿಸಿರಲಿಲ್ಲ. ಅದು ತಿಳಿದಿದ್ದರೆ ಅನವಸರವಾಗಿ ನಿನ್ನಮೇಲೆ ವಾಜ್ಯ ಹೂಡುತ್ತಿರಲಿಲ್ಲ. ನಮ್ಮ ಆಸ್ತಿಯೊಂದಿಗೆ ನಿನ್ನ ಆಸ್ತಿಯನ್ನೂ ಹಾಳುಮಾಡುತ್ತಿರಲಿಲ್ಲ" ಎಂದು ಬಹಳ ನೊಂದವರಂತೆ ನುಡಿದರು. ಸಹೋದರರು ಮೂವರೂ ಸ್ನೇಹಭಾವದಿಂದ ಮಾತನಾಡಿದುದನ್ನು ಕಂಡು ತಾಯಿ ಹರ್ಷಿತಳಾದಳು.

ಪಿಂಗಳನು ಆ ಮಾರನೇಯ ದಿನ ಸಹ ಮಾಮೂಲು ಹೊತ್ತಿಗೆ ನದಿಗೆ ಹೋದನು. ಆ ದಿನಸಹ ಸಾಯಂಕಾಲದ ವರೆವಿಗೆ ಎಷ್ಟು ಪ್ರಯತ್ನಪಟ್ಟರೂ ಬಲೆಯಲ್ಲಿ ಒಂದು ಮೀನಾದರೂ ಬೀಳಲಿಲ್ಲ. ಅವನು ತನ್ನ ಅದೃಷ್ಟವನ್ನು ನಿಂದಿಸಿಕೊಳ್ಳುತ್ತ ಮನೆಯಕಡೆ ನಡೆಯುತ್ತಿರಲು, ನಾಡಿಕೆಯು ಅಂಗಡಿಯವನು ಪಿಂಗಳನನ್ನು ಕೂಗಿ, ಅವನಿಂದ ವಿಷಯವರಿತು, ಸಾಲವಾಗಿ ಸಾಮಾನು ಕೊಟ್ಟನು.





ಈ ರೀತಿ ಒಂದೇಸಮನೆ ಹತ್ತು ದಿನ ಮೀನು ಸಿಗದಿರಲು, ಪಿಂಗಳನು ಬೇಸರಪಟ್ಟ. ಇನ್ನು ಇಲ್ಲಿ ಪ್ರಯೋಜನವಿಲ್ಲವೆಂದು ತೀರ್ಮಾನಿಸಿ ಹನ್ನೊಂದನೇಯ ದಿನ ಒಂದು ಯೋಜನ ದೂರದಲ್ಲಿದ್ದ ಸರಸ್ಸಿಗೆ ಮೀನು ಹಿಡಿಯಲು ಹೋದನು.

ಆ ಸರಸ್ಸಿನಲ್ಲಿ ಬಲೆಬೀಸಿ ಒಂದುಕಡೆ ಕುಳಿತು ಕೊಳ್ಳುತ್ತಿರಲು, ದೂರದಲ್ಲಿ ದೂಳು ಏಳುತ್ತಿರುವುದು ಕಾಣಿಸಿತು. ಯಾರೋ ಸವಾರನು ಬರುತ್ತಿರಬಹುದೆಂದು ಭಾವಿಸಿ, ತಲೆ ಎತ್ತಿ ನೋಡುವಷ್ಟರಲ್ಲಿ ರಾಹುತನೊಬ್ಬನು ಅತಿವೇಗವಾಗಿ ಕುದುರೆಯನ್ನು ಓಡಿಸಿಕೊಂಡು ನೆಟ್ಟಗೆ ಪಿಂಗಳನು ಕುಳಿತಿದ್ದ ಸ್ಥಳಕ್ಕೆ ಬಂದುಬಿಟ್ಟನು. "ಪಿಂಗಳಾ, ನೀನು ನನಗೊಂದು ಸಹಾಯ ಮಾಡಬೇಕು" ಎಂದು ಹೇಳುತ್ತಾ ಕುದುರೆಯಿಂದ ಇಳಿದನು ಆ ಸವಾರ. ತನ್ನನ್ನು ಎಂದೂ ಕಂಡು ತಿಳಿಯದವನು ಒಳ್ಳೆಯಪರಿಚಿತನಂತೆ ನೆಟ್ಟಗೆ ಹತ್ತಿರ ಬಂದು, ಹೆಸರುಹಿಡಿದು ಕೂಗಲು ಪಿಂಗಳನಿಗೆ ಬಹಳ ಆಶ್ಚರ್ಯವಾಯಿತು. ಅವನು ರಾಹುತನನ್ನು ಸಂಶಯಾಸ್ಪದವಾಗಿ ನೋಡುತ್ತಾ "ನನ್ನ ಹೆಸರು ನಿಮಗೆ ಹೇಗೆ ಗೊತ್ತು? ನಿಮಗೆ ಬೇಕಾದ ಸಹಾಯವೇನು?" ಎಂದ.

ಆ ಪ್ರಶ್ನೆಗಳಿಗೆ ಹೊಸಬನು ನಕ್ಕು "ನಿನ್ನ ಹೆಸರೇನು? ನೀನು ಯಾವ ಸಮಯದಲ್ಲಿ ಈ ಸರಸ್ಸಿನ ಬಳಿ ಮೀನು ಹಿಡಿಯಲುಬರುವೆ ಎಂಬುದನ್ನು ನಮ್ಮ ಗುರುಗಳು, ನೀನು ಹುಟ್ಟುವ ಮೊದಲೇ ನನಗೆ ಹೇಳಿದ್ದರು. ಹೂಂ ಅದು ನಲವತ್ತು ವರ್ಷಗಳ ಹಿಂದಿನ ಮಾತು. ಈ ವಿಷಯ ಸದ್ಯಕ್ಕೆ ಮಾತನಾಡುವುದು ಬೇಡ.

ನಾನು ಕೇಳಿದ ಸಹಾಯಮಾಡಬಲ್ಲೆಯಾ?"

"ಅದೇನೋ ಹೇಳಿ. ಸರಿ, ನಿಮ್ಮ ಹೆಸರೇ ಹೇಳಲಿಲ್ಲವಲ್ಲಾ" ಎಂದು ಕೇಳಿದ ಪಿಂಗಳ.

"ನನ್ನ ಹೆಸರು ಮಂಡನ. ನೀನು ಮಾಡ ಬೇಕಾದ ಸಹಾಯ ಬಹಳ ಕಷ್ಟವಾದುದೇನಿಲ್ಲ. ನನ್ನ ಕೈಗಳೆರಡನ್ನೂ ಹಗ್ಗದಿಂದ ಕಟ್ಟಿ, ನನ್ನನ್ನು ಹೊತ್ತುಕೊಂಡು ಹೋಗಿ ಈ ಸರಸ್ಸಿನಲ್ಲಿ ಎಸೆಯಬೇಕು. ಸ್ವಲ್ಪ ಸಮಯದ ನಂತರ ನನ್ನ ತಲೆ ಮೊದಲು ಕಾಣಿಸಿಕೊಂಡರೆ ಬಲೆ ಬೀಸಿ ನನ್ನನ್ನು ಹೊರಕ್ಕೆ ಎಳೆ. ಹಾಗಲ್ಲದೆ ಕಾಲುತೇಲಿದರೆ ನೀನು ಈ ಕುದುರೆಯನ್ನು ತೆಗೆದುಕೊಂಡುಹೋಗಿ ನಗರದಲ್ಲಿರುವ ಕಾಂಚನ ಮಿತ್ರನೆಂಬ ವರ್ತಕನಿಗೆ ಒಪ್ಪಿಸಿದರೆ ಸಾಕು. ಆತನು ಕೂಡಲೇ ನಿನಗೆ ನೂರು ಮೊಹರಿಗಳನ್ನು ಕೊಡುತ್ತಾನೆ" ಎಂದ.

ಪಿಂಗಳನು ಕ್ಷಣಕಾಲ ಆಲೋಚಿಸಿ, ಮಂಡನನು ಹೇಳಿದಪ್ರಕಾರ ಮಾಡಲು ಅಂಗೀಕರಿಸಿದನು. ಮಂಡನನು ಕುದುರೆಯ ಜೀನಿಗೆ ನೇತಾಡುತ್ತಿದ್ದ ಒಂದು ಹಗ್ಗವನ್ನು ಪಿಂಗಳನಿಗೆ ಕೊಟ್ಟನು. ಪಿಂಗಳನು ಮಂಡನನ ಕೈಗಳನ್ನು ಬಿಗಿದುಕಟ್ಟಿ, ಭುಜದಮೇಲೆ ಹಾಕಿಕೊಂಡು ಸರಸ್ಸಿನ ದಡದದಿಣ್ಣೆಯಮೇಲೆ ನಿಂತು, ಅವನನ್ನು ಸರಸ್ಸಿನೊಳಕ್ಕೆ ಎಸೆದನು.

ಒಂದೆರಡು ನಿಮಿಷಗಳ ಕಾಲ ಸರಸ್ಸಿನಲ್ಲಿ ಅಲೆಗಳು ಎದ್ದವು. ಸ್ವಲ್ಪ ಸಮಯದ ನಂತರ ಮಂಡನನ ಕಾಲುಗಳು ಕಾಣಿಸಿಕೊಂಡವು. "ಪಾಪ, ಸತ್ತುಹೋದ" ಎಂದುಕೊಂಡು, ಪಿಂಗಳನು ಕುದುರೆಯನ್ನು ತೆಗೆದುಕೊಂಡು ನಗರಕ್ಕೆ ಹೋದನು.

ಅಲ್ಲಿ ಅವನಿಗೆ ಭಾರಿ ವರ್ತಕ ಕಾಂಚನ ಮಿತ್ರನ ಅಂಗಡಿ ಕಂಡು ಹಿಡಿಯುವುದು ಕಷ್ಟವಾಗಲಿಲ್ಲ. ಕಾಂಚನಮಿತ್ರನು, ಪಿಂಗಳ ಮತ್ತು ಅವನೊಂದಿಗಿದ್ದ ಕುದುರೆಯನ್ನು ಕಂಡು "ದುರಾಶೆ ದುಃಖಕ್ಕೆ ಹೇತು" ಎಂದು ಗೊಣಗುತ್ತಾ, ಸಂದೂಕದಿಂದ ನೂರು ಮೊಹರಿಗಳನ್ನು ತೆಗೆದು ಪಿಂಗಳನಿಗೆ ಕೊಟ್ಟು ಹೀಗೆಂದು ಹೇಳಿದನು: "ತಮ್ಮಾ, ಈ ವಿಷಯುವಾವುದನ್ನೂ ಹೊರಕ್ಕೆ ಹೇಳಬೇಡ. ತುಂಬಾ ರಹಸ್ಯವಾಗಿರಲಿ. ಅದು ನಿನಗೆ ತುಂಬಾ ಕ್ಷೇಮಕರ."

[ಇನ್ನೂ ಇದೆ]





# ಪುಟ್ಟ ಮದುಮಗ

ಹಿಂದಿನಕಾಲದಲ್ಲಿ ಹಂಸಗಳ ದ್ವೀಪವನ್ನು ಒಬ್ಬ ರಾಜನು ಆಳುತ್ತಿದ್ದನು. ಆ ರಾಜನಿಗೆ ಇಂದುಮತಿ ಎಂಬ ಮಗಳಿದ್ದಳು. ಆ ಮಗಳನ್ನು ನೋಡಿಕೊಳ್ಳಲು ಒಬ್ಬ ದಾದಿಯನ್ನು ನೇಮಿಸಿದ್ದನು. ಇಂದುಮತಿ ಸದಾ ತೋಟದಲ್ಲಿ ಓಡಾಡುತ್ತಾ ಅಲ್ಲಿ ತಾನು ಕಂಡ ಪ್ರತಿ ಪಕ್ಷಿ, ಪ್ರತಿ ಪ್ರಾಣಿಯನ್ನು ಕುರಿತು ಪ್ರಶ್ನೆ ಹಾಕುತ್ತಿದ್ದಳು.

ಇಂದುಮತಿ ಒಂದು ದಿನ ಒಂದು ತೊಂಡೆಯನ್ನು ನೋಡಿದಳು. 'ಪ್ರಳಯಕ್ಕೆ ಮೊದಲು ಈ ತೊಂಡೆಗಳು ಬೆಟ್ಟದಷ್ಟು ಎತ್ತರ ಬೆಳೆಯುತ್ತಿದ್ದುವು. ಅದರ ಭಾರವನ್ನು ಹೊರಲಾರೆನೆಂದು ಭೂದೇವಿ ಮೊರೆಯಿಟ್ಟುಕೊಳ್ಳಲು, ಬ್ರಹ್ಮದೇವನು ಅವುಗಳಿಗೆ ಬೆಳವಣಿಗೆಯಿಲ್ಲದಂತೆ ಮಾಡಿದ' ಎಂದು ದಾದಿ ರಾಜಕುಮಾರಿಗೆ ಕಥೆಯನ್ನು ಹೇಳಿದಳು.

ಇಂದುಮತಿಗೆ ಅದೇಕೋ ಆ ತೊಂಡೆಯ ಮೇಲೆ ಮಮತೆಯುಂಟಾಗಿ ಅದನ್ನು ಉಪಾಯವಾಗಿ ಹಿಡಿದು, ತಂದೆಯ ಮಡಲಲ್ಲಿ ಹಾಕಿದಳು. ಪರಧ್ಯಾನದಲ್ಲಿದ್ದ ರಾಜನು ಬೆಚ್ಚಿಬಿದ್ದನು. ಆತನಿಗೆ ಮಗಳ ವರ್ತನೆ ವಿಪರೀತ ಕೋಪವನ್ನುಂಟುಮಾಡಿತು. ಅಮಾಯಕಳಾದ ಇಂದುಮತಿ ಕಿಲಕಿಲ ನಕ್ಕು "ಇಷ್ಟು ಸಣ್ಣ ತೊಂಡೆ ನೋಡಿ ಹೆದರಿಬಿಟ್ಟಿರಿ, ಇದು ಬೆಳೆದು ದೊಡ್ಡದಾದರೆ ಏನು ಮಾಡುತ್ತಿದ್ದೆಯಪ್ಪಾ" ಎಂದು ಹಂಗಿಸಿದಳು.

"ಈ ಓತಿಕಾಟ ನಿನ್ನಷ್ಟು ಎತ್ತರ ಬೆಳೆಯುವವರೆವಿಗೆ ನಿನಗೆ ಮದುವೆ ಮಾಡುವುದಿಲ್ಲ. ಈಗಲಾದರೂ ತಿಳಿಯಿತೇ ಏನು ಮಾಡುತ್ತೇನೆ ಅಂತ" ಎಂದು ರಾಜನು ಹುಂಕರಿಸಿದನು.

"ಅದೆಂತ ಮಾತು ಮಹಾಪ್ರಭು, ಸಣ್ಣ ಮಗು ಏನೋ ತಿಳಿಯದೆ ಮಾಡಿದಳು. ಕ್ಷಮಿಸಿಬಿಡಿ" ಎಂದು ಹೇಳಿದರು ಅಲ್ಲಿದ್ದ ಸಚಿವರು ಮತ್ತು ಸಾಮಂತರು. ರಾಜನು "ನನ್ನ ಮಾತು ನಡೆಯಲೇ ಬೇಕು" ಎಂದ.

ರಾಜನು ಈ ರೀತಿ ಹೇಳಿದನೆಂದು ಕೇಳಿದ ದಾದಿ ಇಂದುಮತಿಯನ್ನು ಆಲಿಂಗಿಸಿಕೊಂಡು "ಅಯ್ಯೋ, ನನ್ನ ಕಂದಮ್ಮನಿಗೆ ಇನ್ನು ಮದುವೆಯಾಗುವ ಸೂಚನೆಯೇ ಇಲ್ಲವೆಂದು

ಎಸ್. ಸೀತಾಲಕ್ಷ್ಮಿ



ತೋರುತ್ತಿದೆ. ನಾನೇನು ಮಾಡಲಿ" ಎಂದು ಅತ್ತಳು. "ಅಳಬೇಡ ಚಿಕ್ಕಮ್ಮ. ತೊಂಡೆ ದೊಡ್ಡ ದಾಗುತ್ತಲ್ಲ" ಎಂದಳು ಇಂದುಮತಿ.

"ದೊಡ್ಡದಾಗುವುದಿಲ್ಲ ತಾಯಿ. ಬ್ರಹ್ಮನ ಶಾಪವಿದೆಯಲ್ಲ" ಎಂದಳು ದಾದಿ.

ಅಂದು ಮೊದಲುಗೊಂಡು ಇಂದುಮತಿ ಪ್ರತಿದಿನ "ಓ, ಬ್ರಹ್ಮನೇ, ತೊಂಡೆಯ ಶಾಪ ವಿಮುಕ್ತಿ ಹೊಂದುವಂತೆ ಅನುಗ್ರಹಿಸಿ. ಅದು ನನ್ನಷ್ಟೆತ್ತರ ಬೆಳೆಯುವಂತೆ ಕರುಣಿಸು"ಎಂದು ರಹಸ್ಯವಾಗಿ ಪ್ರಾರ್ಥಿಸುತ್ತಿದ್ದಳು.

ಬ್ರಹ್ಮದೇವನು ಅವಳ ಮೊರೆ ಕೇಳಿ ಶಾಪ ತೆಗೆದು ಹಾಕಿದನೋ, ಇಲ್ಲ ಆ ತೊಂಡೆ ಮಾಮೂಲು ತೊಂಡೆಯಂತಲ್ಲವೋ ಅದು ದೇವರಿಗೇ ಗೊತ್ತು. ಅದು ದಿನದಿನಕ್ಕೆ ಒಂದೊಂದು ಅಂಗುಲ ಬೆಳೆಯುತ್ತಾ ಇಂದು ಮತಿಗೆ ಯುಕ್ತವಯಸ್ಸು ಬರುವವೇಳೆಗೆ ಅದೊಂದು ಮೊಸಳೆಯಷ್ಟು ದೊಡ್ಡದಾಯಿತು. ಇದನ್ನು ಕಂಡು ರಾಜನು ಸಂತೋಷಗೊಂಡನು. ಕೋಪಾವೇಶದಲ್ಲಿ ಬಾಯಿತಪ್ಪಿ ಮಗಳನ್ನು ಆ ರೀತಿ ನಿಂದಿಸಿದನಾದರೂ, ಎಲ್ಲಿ ಮಾತು ಕೆಡುವು ದೇನೋ ಎಂದು ಹಗಲಿರಳು ಹೆದರುತ್ತಿದ್ದನು. ಆ ಹೆದರಿಕೆ ತೊಲಗಿತು.

ಒಂದು ದಿನ ಮಂತ್ರಿ ರಾಜನೊಂದಿಗೆ "ಮಹಾ ಪ್ರಭು, ರಾಜಕುಮಾರಿಯ ವಿವಾಹದ ವಿಷಯ ವೇನುಮಾಡಿದಿರಿ" ಎಂದು ಕೇಳಿದ.

"ರಾಜಕುಮಾರಿಯ ಬಳಿಯಿರುವ ತೊಂಡೆ ಯನ್ನು ಕೊಲ್ಲಿಸಿ, ಅದರ ಹೃದಯ ಹೊರಗೆ ತೆಗೆಯಿಸಿ, ರಾಜಕುಮಾರಿಯ ವಿವಾಹವೆಂದು ಎಲ್ಲ ದೇಶಗಳಿಗೂ ಸಮಾಚಾರ ಕಳುಹಿಸಿ. ಸ್ವಯಂವರಕ್ಕೆ ಬಂದವರಲ್ಲಿ ಯಾರು ಆ ಹೃದಯ ತೊಂಡೆಯದೆಂದು ಹೇಳುವರೋ ಅವರಿಗೆ ರಾಜ ಕುಮಾರಿಯನ್ನು ಕೊಟ್ಟು ವಿವಾಹಮಾಡುವೆವು. ಬಹಳ ಬುದ್ಧಿವಂತನಾದ ಹೊರತು ನಿಜಾಂಶ ವನ್ನು ತಿಳಿಯಲಾರ" ಎಂದ ರಾಜ.

ಆ ಪ್ರಕಾರವೇ ಮಂತ್ರಿ ತೊಂಡೆಯನ್ನು ಕೊಲ್ಲಿಸಿ, ಅದರ ಹೃದಯವನ್ನು ಹೊರಗೆ ತೆಗೆ ಯಿಸಿ, ಒಂದು ಗಾಜಿನ ಸೀಸೆಯಲ್ಲಿ ಭದ್ರಪಡಿ ಸಿದನು. ತರುವಾಯ ಇಂದುಮತಿಯ ಮದು ವೆಯ ಮುಹೂರ್ತವನ್ನು ನಿರ್ಣಯಿಸಿ, ದೂರ ದೇಶಗಳಲ್ಲಿರುವ ರಾಜಕುಮಾರರಿಗೆ ಆಹ್ವಾನ ಗಳನ್ನು ಕಳುಹಿಸಿದನು.

ರಾಜಕುಮಾರಿಯ ವಿವಾಹಕ್ಕೆ ರಾಜನು ಮಾಡಿದ ಈ ವಿಚಿತ್ರವಾದ ಏರ್ಪಾಟನ್ನು ಕೇಳಿ ದಾದಿ ಬಹಳ ಬೇಸರಗೊಂಡಳು. 'ಈ ರಾಜನಿಗೆ ಆಗ್ರಹ ಬಂದರೂ ಕಷ್ಟ, ಅನುಗ್ರಹವುಂಟಾದರೂ ಕಷ್ಟ. ಆ ಹೃದಯ ತೊಂಡೆಯದೆಂದು ಈ ಪ್ರಪಂಚದಲ್ಲಿ ಯಾರು ಹೇಳಬಲ್ಲರು? ತನ್ನ ಮಗಳಿಗೆ ಮದುವೆಯಾಗಕೂಡದೆಂದು ಆತನ ಮನೀಷೆಯಿರಬೇಕು' ಎಂದು ಕೊಂಡಳು.

ಸ್ವಯಂವರ ಹತ್ತಿರಕ್ಕೆ ಬಂತು. ದೇಶದೇಶಗಳಿಂದ ಅತಿಥಿಗಳು ಬಂದು ಇಳಿಯುತ್ತಿದ್ದರು. ಅವರೆಲ್ಲ ಬಂದಿಳಿಯಲು ಪ್ರತ್ಯೇಕವಾಗಿ ಏರ್ಪಡಿಸಿದ್ದ ಬಿಡದಿಗಳಿಗೆ ಹೋಗಿ ದಾದಿ ಎಲ್ಲರನ್ನೂ ನೋಡಿಕೊಂಡು ಬಂದಳು. ಯಾರೂ ಅವಳ ಮನಸ್ಸಿಗೆ ಹಿಡಿಸಲಿಲ್ಲ. 'ಎಲ್ಲಾ ಒಂದೊಂದು ಅವತಾರ. ಯಾರೂ ನಮ್ಮ ಇಂದುಮತಿಯ ಕಾಲು ಉಗುರಿಗೆ ಸಮನಾಗಲಾರರು' ಎಂದು ಕೊಂಡಳು ದಾದಿ. ಇಷ್ಟರಲ್ಲಿ ಹವಳದ್ವೀಪ ರಾಜಕುಮಾರನು ಬಂದನು. ಆತನು ತಾರೆಗಳ ನಡುವೆ ಚಂದಮನಂತೆ ಶೋಭಿಸುತ್ತಿದ್ದನು. 'ಈ ಜೋಡು ಸೊಗಸಾಗಿದೆ. ಬುದ್ಧಿವಂತನಂತೆ ಕಾಣಿಸುತ್ತಾನೆ. ಹೇಗಾದರೂ ರಾಜಕುಮಾರಿಯನ್ನು ಆತನು ವರಿಸುವಂತೆ ಉಪಾಯ ಹೂಡಬೇಕು' ಎಂದು ದಾದಿ ನಿಶ್ಚಯಿಸಿದಳು.

ಆಕೆ ಅಂತಃಪುರಕ್ಕೆ ಹಿಂತಿರುಗಿ ಅಲ್ಲಿ ಕೆಲಸ ಮಾಡುವ ನಾಲ್ಕು ಜನ ಗೂನರಲ್ಲಿ ನಂಬಿಕೆಯಾದವನನ್ನು ಕರೆದು "ಲೋ" ನಾಳೆ ನಮ್ಮ ರಾಜಕುಮಾರಿಯ ಸ್ವಯಂವರ. ಸ್ವಯಂವರಕ್ಕೆ



ಬಂದಿರುವ ರಾಜಕುಮಾರರನ್ನೆಲ್ಲಾ ಕರೆದು ಗಾಜಿನಸೀಸೆಯಲ್ಲಿ ಯಾವ ಜಂತುವಿನ ಹೃದಯವಿರುವುದೋ ಹೇಳು ಎಂದು ಕೇಳುತ್ತಾರೆ. ಸರಿಯಾದ ಉತ್ತರ ಹೇಳಿದವರಿಗೆ ರಾಜಕುಮಾರಿಯನ್ನು ಕೊಟ್ಟು ವಿವಾಹಮಾಡುವರು. ಆದ್ದರಿಂದ ನೀನೊಂದು ಕೆಲಸ ಮಾಡಬೇಕು. ಈ ರಾತ್ರಿ ಅತಿಥಿಗಳು ಇಳಿದಿರುವ ಬಿಡದಿಗೆ ಹೋಗಿ, ಹೇಗಾದರೂ ಹವಳದ್ವೀಪದ ರಾಜಕುಮಾರನನ್ನು ಭೇಟಿಮಾಡಿ, ಅದರಲ್ಲಿರುವುದು ತೊಂಡೆಯ ಹೃದಯವೆಂದು ರಹಸ್ಯವಾಗಿ ತಿಳಿಸಬೇಕು. ನಿನಗೆ ಒಳ್ಳೇ ಬಹುಮಾನ ಕೊಡುತ್ತೇನೆ. ಈ ರಹಸ್ಯ ಬೇರೊಬ್ಬರಿಗೆ ತಿಳಿಯಿತೆಂದರೆ ನಿನ್ನ ತಲೆ ತೆಗೆದುಹಾಕಿಬಿಡುತ್ತೇನೆ. ಎಚ್ಚರಿಕೆ" ಎಂದಳು. ಗೂನನು ತಲೆಯಾಡಿಸಿದ. ಆದರೆ ಅವನು

ಹವಳದ್ವೀಪ ರಾಜಕುಮಾರನನ್ನು ಭೇಟಿ ಮಾಡಲೇ ಇಲ್ಲ. ಅಷ್ಟು ಜನ ಅತಿಥಿಗಳಲ್ಲಿ ಆ ರಾಜಕುಮಾರನನ್ನು ಹುಡುಕಿ, ಯಾರಿಗೂ ತಿಳಿಯದಂತೆ ಈ ರಹಸ್ಯವನ್ನು ಹೇಳುವುದೆಂದರೆ ಅವನಿಗೆ ಕಷ್ಟಕರವಾಗಿ ಕಂಡುಬಂತು. ಅಷ್ಟೇ ಅಲ್ಲ. ಅವನಿಗೆ ಒಂದು ದುರ್ಬುದ್ಧಿ ಸಹ ಉಂಟಾಯಿತು. ರಾಜಕುಮಾರಿಯನ್ನು ವಿವಾಹವಾಗಲು ಅವಶ್ಯಕವಾದ ರಹಸ್ಯ ತನಗೆ ತಿಳಿದಿರಲು ಮತ್ತೊಬ್ಬರಿಗೇಕೆ ಹೇಳಬೇಕು? ತಾನೇ ಆಕೆಯನ್ನು ಮದುವೆಯಾಗಬಾರದೇಕೆ? ಹೀಗೆಂದು ಯೋಚಿಸಿ ಅವನು ಹಾಯಾಗಿ ಮಲಗಿ ನಿದ್ರಿಸಿದನು.

ಮಾರನೇಯ ದಿವಸ ಅತಿಥಿಗಳೆಲ್ಲರೂ ರಾಜಭವನಕ್ಕೆ ಬಂದರು. ರಾಜನು ಅವರಿಗೆ ಗಾಜಿನ ಸೀಸೆಯಲ್ಲಿರುವ ವಸ್ತುವನ್ನು ತೋರಿಸಿ "ಇದು ಯಾವ ಪ್ರಾಣಿಯ ಹೃದಯವೋ ಸರಿಯಾಗಿ ಹೇಳಿದವರಿಗೆ ನನ್ನ ಮಗಳನ್ನು ಕೊಟ್ಟು ವಿವಾಹ ಮಾಡುವುದಷ್ಟೇ ಅಲ್ಲ, ಅರ್ಧ ರಾಜ್ಯವನ್ನೂ ಕೊಡುವೆನು" ಎಂದು ಹೇಳಿದನು.

ಯಾರಿಗೆ ತೋರಿದ ಉತ್ತರ ಅವರು ಹೇಳಿದರು. ನಾಯಿಗಿಂತಲೂ ಸಣ್ಣ ಪ್ರಾಣಿಯ ಹೆಸರನ್ನು ಯಾರೂ ಹೇಳಲಿಲ್ಲ. ಕೆಲವರು ಅದು ಆನೆಯ ಹೃದಯವಿರಬೇಕೆಂದು ಹೇಳಿದರು.

ಎಲ್ಲರ ಸರದಿ ಮುಗಿದನಂತರ ಗೂನನು ಮುಂದೆ ಹೆಜ್ಜೆಯಿಟ್ಟು "ಮಹಾಪ್ರಭು, ಆ ಹೃದಯ ಯಾವ ಜಂತುವುದೆಂದು ನಾನು ಹೇಳಿದರೆ ನನಗೆ ರಾಜಕುಮಾರಿಯನ್ನು ಕೊಟ್ಟು ವಿವಾಹಮಾಡುವಿರಾ? ಅರ್ಧರಾಜ್ಯ ಕೊಡುವಿರಾ?" ಎಂದು ಕೇಳಿದನು. "ಆಹಾ ಆಡಿದ



ಮಾತಿಗೆ ತಪ್ಪಲಾರೆ. ತಿಳಿದಿದ್ದರೆ ಹೇಳು" ಎಂದ ರಾಜ. "ಅದು ತೊಂಡೆಯ ಹೃದಯ" ಎಂದು ಹೇಳಿದ ಆ ಡುಬ್ಬ.

ಎಲ್ಲರೂ ಪಕಪಕ ನಕ್ಕುಬಿಟ್ಟರು. ರಾಜ ಗಂಭೀರವಾಗಿ "ನಗಬೇಡಿ. ಆತನು ಹೇಳಿದ ಮಾತು ಸತ್ಯ. ಅದು ಒಂದು ಓತಿಕಾಟದ ಹೃದಯ. ಆಡಿದ ಮಾತಿನಂತೆ ನಮ್ಮ ರಾಜ ಕುಮಾರಿಯನ್ನು ಈ ಗೂನನಿಗೆ ಕೊಟ್ಟು ವಿವಾಹಮಾಡುವೆವು. ಅರ್ಧರಾಜ್ಯಾಭಿಷೇಕಸಹ ಮಾಡುವೆವು. ಅತಿಥಿಗಳೆಲ್ಲ ಉತ್ಸವದಲ್ಲಿ ಭಾಗ ವಹಿಸಿ, ನಮ್ಮನ್ನು ಸಂತೋಷಪಡಿಸಬೇಕೆಂದು ಪ್ರಾರ್ಥಿಸುತ್ತೇನೆ" ಎಂದ.

ಕೂಡಲೇ ಆ ಡುಬ್ಬನನ್ನು ಅಲಂಕರಿಸಿ ಮದುಮಗನನ್ನಾಗಿ ಮಾಡಿದರು. ಆ ತರುವಾಯ ಔತಣಕೂಟ ನಡೆಯಿತು. ಔತಣಕ್ಕೆ ಮುಂಚೆ ಅನೇಕ ವಿನೋದಕೂಟಗಳನ್ನು ಏರ್ಪಡಿಸಿದ್ದರು. ಡುಬ್ಬನ ಉಳಿದ ಮೂವರು ಸ್ನೇಹಿತರು ಹಾಸ್ಯ ಚಟಾಕಿ ಹಾರಿಸಿ ಅತಿಥಿಗಳನ್ನು ನಗಿಸಿದರು. ತರುವಾಯ ಅವರು ಮದುಮಗನ ಬಳಿ ಸಾರಿ "ಲೋ ನೀನೀಗ ರಾಜನಾಗಲಿರುವೆ. ರಾಜಕುಮಾರಿ ಯನ್ನು ವಿವಾಹವಾಗಲಿರುವೆ. ದೊಡ್ಡ ಮನುಷ್ಯ ನಾಗಿಬಿಟ್ಟೆ ಕಣಯ್ಯಾ, ನಮಗೆ ಭಾರಿ ಬಹು ಮಾನಗಳನ್ನು ಕೊಟ್ಟು ಸಂತೋಷಪಡಿಸು" ಎಂದು ಪರಿಹಾಸ್ಯಮಾಡಿದರು.

ಗೂನನಿಗೆ ಕೋಪ ಬಂತು. ಅವನು ತಾನು ಕುಳಿತಿದ್ದ ಆಸನದಿಂದೆದ್ದು ಬಂದು ಕೋಲು ತೆಗೆದುಕೊಂಡು ಅವರನ್ನು ಹೊಡೆದ. "ನಡಿಯಿ ರಾಚೆ, ಗೂನು ಮುಂಡೇವೆ, ಹೊರಡಿ ಇಲ್ಲಿಂದ"





ಎಂದು ಹೊರಗೆ ದಬ್ಬಿದ. ಇದೆಲ್ಲವನ್ನೂ ನೋಡುತ್ತಿದ್ದ ರಾಜಕುಮಾರಿಗೆ ಏಟುತಿಂದ ಗೂನರನ್ನು ಕಂಡು ಕನಿಕರವುಂಟಾಯಿತು. ಒಬ್ಬ ನೌಕರನನ್ನು ಕೂಗಿ ರಹಸ್ಯವಾಗಿ ಹೀಗೆಂದಳು "ಆ ಮೂವರು ಗೂನರನ್ನು ನನ್ನ ಕೋಣೆಗೆ ಕರೆದುಕೊಂಡು ಹೋಗು. ನಾನು ಈಗಲೇ ಬಂದು ಅವರಿಗೆಲ್ಲಾ ತಕ್ಕ ಬಹುಮಾನಗಳನ್ನು ಕೊಡುತ್ತೇನೆ" ಎಂದಳು.

ಔತಣಕೂಟ ಮುಗಿದ ತಕ್ಷಣ ರಾಜಕುಮಾರಿ ತನ್ನ ಕೋಣೆಗೆ ಓಡಿದಳು. ಅವಳಿಗಾಗಿ ಗೂನರು ಕಾದಿದ್ದರು. ಇಂದುಮತಿ ಬಾಗಿಲಿಗೆ ಚಿಲಕ ಹಾಕಿ, ಗೂನರಿಗೆ ಕೊಡಲು ತನ್ನ ಪೆಟ್ಟಿಗೆಗಳಲ್ಲಿದ್ದ ಬಟ್ಟೆ ಬರೆ, ರತ್ನಾಭರಣಗಳನ್ನು ಹೊರಗೆ ತೆಗೆದಳು. ಇಷ್ಟರಲ್ಲಿ ಹೊರಗೆ ಹೆಜ್ಜೆಯ ಸಪ್ಪಳವಾಯಿತು. ಬಾಗಿಲು ಯಾರೋ ತಟ್ಟಿದರು. "ಯಾರವರು?" ಎಂದು ಕೇಳಿದಳು ಇಂದುಮತಿ. ರಾಜ ಮತ್ತು ಮದುಮಗನ ಧ್ವನಿ ಕೇಳಿಸಿತು. ಇಂದುಮತಿಗೆ ದಿಕ್ಕೇ ತೋರದಾಯಿತು. ಆ ಮೂವರು ಗೂನರನ್ನು ಒಂದು ಪೆಟ್ಟಿಗೆಯಲ್ಲಿ ಮಲಗುವಂತೆ ಹೇಳಿ, ಮುಚ್ಚಳವಿಟ್ಟು, ಬೀಗ ಹಾಕಿದಳು. ನಂತರ ಮೆಲ್ಲನೆ ಹೋಗಿ ಬಾಗಿಲು ತೆಗೆದಳು. ಇಂದುಮತಿಯ ತಂದೆ, ಭಾವಿಪತಿ ಒಳಗೆ ಪ್ರವೇಶಮಾಡಿದರು.

ಅವರೆಷ್ಟುಹೊತ್ತಾದರೂ ಅಲ್ಲಿಂದ ಕದಲಲಿಲ್ಲ. ಇಂದುಮತಿಯ ತಂದೆ ದೊಡ್ಡ ಉಪನ್ಯಾಸ ಕೊಟ್ಟ. "ಮಾತುಕೊಟ್ಟು ತಪ್ಪಿದವರು ನಮ್ಮ ವಂಶದಲ್ಲಿ ಯಾರೂ ಇಲ್ಲ. ತಂದೆಯ ಮಾತಿನಂತೆ ನಡೆಯುವುದು ಮಗಳ ಕರ್ತವ್ಯ; ವಿಧಿ. ಹೆಂಗಸಿಗೆ ಗಂಡನಿಗಿಂತ ಮೀರಿದ ದೇವರಿಲ್ಲ. ಮಹಾರಾಜರಲ್ಲೂ ಗೂನರು ಇದ್ದಾರೆ" ಹೀಗೆಂದು ಸೂರ್ಯಾಸ್ತಮಯದವರೆವಿಗೂ ಬುದ್ಧಿವಾದ ಹೇಳಿ ಮಹಾರಾಜನು ತನ್ನ ಭಾವಿ ಅಳಿಯನೊಂದಿಗೆ ಮದುವೆಯ ಏರ್ಪಾಟುಗಳನ್ನು ನೋಡಲು ಹೋದನು. ನಡುರಾತ್ರಿಗೆ ಲಗ್ನ.

ಅವರು ಹೋದ ಕೂಡಲೇ ಇಂದುಮತಿ ಲಗುಬಗನೆ ಹೋಗಿ ಪೆಟ್ಟಿಗೆಯ ಮುಚ್ಚಳ ತೆಗೆದಳು. ಒಳಗಿನ ದೃಶ್ಯ ನೋಡಿ ಅವಳು ಬೆದರಿದಳು. ಆ ಮೂವರು ಗೂನರು ಸತ್ತುಹೋಗಿದ್ದರು. ಇಂದುಮತಿ ತನ್ನ ದಾದಿಗೆ ನಡೆದುದನ್ನೆಲ್ಲಾ ಹೇಳಿದಳು. ಬುದ್ಧಿಶಾಲಿನಿಯಾದ ಆ ದಾದಿ ಕೂಡಲೇ ನಗರಕ್ಕೆ ಹೋಗಿ ಒಬ್ಬ

ದೃಢಕಾಯನನ್ನು ಹುಡುಕಿ " ಲೋ, ಒಂದು ರಹಸ್ಯವಾದ ಕೆಲಸಮಾಡಬೇಕು. ಅರಮನೆಯಲ್ಲಿ ಒಂದು ಗೋಣಿ ಚೀಲವಿದೆ. ಅದನ್ನು ಕತ್ತಲಾದಮೇಲೆ ತೆಗೆದುಕೊಂಡು ಹೋಗಿ ಸಮುದ್ರದಲ್ಲಿಸೆಯಬೇಕು. ಮೊದಲು ಹತ್ತು ರೂಪಾಯಿ ಕೊಡುತ್ತೇನೆ. ಕೆಲಸ ಮುಗಿದ ನಂತರ ಇನ್ನೊಂದಿಪ್ಪತ್ತು ರೂಪಾಯಿ ಕೊಡುವೆನು" ಎಂದಳು. ಚಿಲ್ಲರೆ ಕಾಸು ಸಂಪಾದಿಸುತ್ತಿದ್ದ ಆ ಬಡವನಿಗೆ ಭಾರಿ ಸಿರಿ ಸಿಕ್ಕಿದಂತೆ ಆನಂದವಾಯಿತು.

ದಾದಿ ಅವನನ್ನು ಸಂಗಡ ಕರೆದುಕೊಂಡು ಇಂದುಮತಿಯ ಕೋಣೆಗೆ ಬಂದಳು. ಅಲ್ಲೊಂದು ಚೀಲವಿತ್ತು. ಅದನ್ನು ಎತ್ತಿಕೊಂಡು ಹೊರಟ ಆ ಬಡಪಾಯಿ. ಸಮುದ್ರದಲ್ಲಿಸೆದು ಉಳಿದ ಇಪ್ಪತ್ತು ರೂಪಾಯಿಗಳನ್ನು ತೆಗೆದುಕೊಳ್ಳಲು ಅಂತಃಪುರಕ್ಕೆ ಬಂದ. ಆದರೆ ಅವನು ಬಂದಾಗ ಚೀಲ ಮತ್ತೆ ಯಥಾಸ್ಥಾನದಲ್ಲೆ ಇತ್ತು. ಈ ಚೀಲ ಭಲೆ ಕಿಲಾಡಿಯಿದೆ. ನನ್ನನ್ನು ಮೋಸಗೊಳಿಸಿ ಮತ್ತೆ ಬಂತು. ಈ ಸಲವಾದರೂ ಮೋಸಹೋಗದೆ ಅದನ್ನು ಸಮುದ್ರದಲ್ಲಿ ಹಾಕಿ ಬಾ" ಎಂದಳು ದಾದಿ.

ಈಸಾರಿ ಆ ಬಡವನು ನೀರಿನಲ್ಲಿ ಸ್ವಲ್ಪ ದೂರ ನಡೆದು ಚೀಲವನ್ನು ಕೆಡೆದು ಬಂದ. ಆದರೆ ಅವನು ಹಿಂದಿರುಗುವ ವೇಳೆಗೆ ಮತ್ತೆ ಚೀಲ ಹಿಂದಿನ ಸ್ಥಳದಲ್ಲೇ ಇತ್ತು. ಆ ದೃಢಕಾಯನಿಗೆ ಬಹಳ ಕೋಪ ಬಂತು. ಅವನು ಅದನ್ನು ಹೊತ್ತುಕೊಂಡು ಹೋಗಿ ಸಮುದ್ರದ



ಬಳಿಯಲ್ಲಿ ಅದನ್ನು ಬಿಚ್ಚಿ ನೋಡಿದ. ಒಳಗೆ ಒಬ್ಬ ಗೂನನ ಶರೀರವಿತ್ತು.

" ಹೋ, ಬದ್ಮಾಷ್, ಸತ್ತಂತೆ ನಟಿಸುತಿಯಾ? ನಿನ್ನ ಯುಕ್ತಿ ನನ್ನ ಬಳಿ ನಡೆಯೋದಿಲ್ಲ." ಎಂದು ಶವವನ್ನು ಹೊರಗೆಳೆದು ತನ್ನ ಕುಡುಗೋಲಿನಿಂದ ಚೂರುಚೂರಾಗಿ ಕತ್ತರಿಸಿ ಸಮುದ್ರದಲ್ಲಿ ಎಸೆದು " ಇನ್ನು ಬಾ ನೋಡುತ್ತೇನೆ" ಎಂದು ಖಾಲಿ ಚೀಲವನ್ನು ಭುಜದ ಮೇಲೆ ಹಾಕಿಕೊಂಡು ಅಂತಃಪುರಕ್ಕೆ ಬಂದ.

ಅವನು ರಾಜಕುಮಾರಿಯ ಕೋಣೆಯ ಮೆಟ್ಟಲು ಬಳಿಗೆ ಬರಲು ಅವನಿಗಿಂತ ಮುಂದೆ ಹೋಗುತ್ತಿದ್ದ ಗೂನಿ ಮದುಮಗ ಕಾಣಿಸಿದ. " ಎಲಾ, ನಿನ್ನ ಮನೆ ಹಾಳಾಗ, ಚೂರುಚೂರು ಮಾಡಿದರೂ ಮತ್ತೆ ಜೀವದಿಂದ ಬಂದೆಯಾ?

ನೋಡುತ್ತಿರು ನಿನ್ನನ್ನು ಏನು ಮಾಡುವೆನೋ" ಎಂದು ಕಟಿಕಟಿ ಹಲ್ಲು ಕಡಿದು ಸರಸರ ಮೆಟ್ಟಿಲು ಹತ್ತಿ ಮದುಮಗನ ಕತ್ತು ಹಿಚುಕಿ ಚೀಲದಲ್ಲಿ ತುರುಕಿ, ಹೆಗಲಮೇಲೆ ಹಾಕಿಕೊಂಡು ತನ್ನ ಮನೆಗೆ ಹೋದ. ಮನೆಯ ಸಮೀಪದಲ್ಲೇ ಒಂದು ಚಿತೆಮಾಡಿ, ಆ ಶವವನ್ನು ಚೀಲದೊಂದಿಗೆ ಭಸ್ಮಮಾಡಿ, ಆ ಭಸ್ಮವನ್ನು ಸಮುದ್ರದಲ್ಲಿ ಎರಚಿದ. ಲಗ್ನಕ್ಕೆ ಕೇವಲ ಕೆಲವೇ ಗಂಟೆಗಳಿರುವಾಗ ಅವನು ಅಂತಃಪುರಕ್ಕೆ ಬಂದು ದಾದಿಯೊಂದಿಗೆ" ತಾಯಿ, ತುಂಬಾ ಶ್ರಮಪಟ್ಟೆ, ಭಾರಿ ಬಹುಮಾನ ಕೊಡಿಸಿ ಕೊಡಬೇಕು " ಎಂದ.

"ಏಕಿಷ್ಟು ಹೊತ್ತಾಯಿತು?" ಎಂದು ದಾದಿ ಕೇಳಿದಳು. ಆ ಮೂರ್ಖ ಶಿಖಾಮಣಿಯನ್ನು ಮೂರುಸಾರಿ ನೀರಿನಲ್ಲಿ ಮುಳುಗಿಸಿದರೂ ನಾಲ್ಕನೇಸಾರಿ ನನಗಿಂತಲೂ ಮುಂಚೆ ಅಂತಃಪುರಕ್ಕೆ ಅಲಂಕರಿಸಿಕೊಂಡು ಬರುತ್ತಿದ್ದುದನ್ನು ಕಂಡೆ. ಅವನನ್ನು ಹಿಡಿದುಕೊಂಡು ಹೋಗಿ ಭಸ್ಮಮಾಡಿ, ಸಮುದ್ರದಲ್ಲಿ ಕಲಸಿ ಬಂದೆ" ಎಂದ ಆ ಧೃಢಕಾಯ.

ಈ ಮಾತು ಕೇಳಿ ದಾದಿ ಮತ್ತು ಇಂದುಮತಿಯರು ಆನಂದಿಸಿದರು. ದಾದಿ ಅವನಿಗೆ ಥೈಲಿಹಣ ಕೊಟ್ಟಳು. ರಾಜಕುಮಾರಿ ತನ್ನ ಕೊರಳಲ್ಲಿದ್ದ ಮುತ್ತಿನ ಹಾರವನ್ನು ಬಹುಮಾನವಾಗಿಕೊಟ್ಟಳು. ಅವನು ಅವರಿಬ್ಬರಿಗೂ ವಂದಿಸಿ ತನ್ನ ಮನೆಗೆ ನಡೆದನು.

ಮುಹೂರ್ತ ಸಮೀಪಿಸುತಿತ್ತು. ಗೂನ ಮದುಮಗನ ಸುಳಿವಿಲ್ಲ. ದಾದಿ ರಾಜನೊಂದಿಗೆ "ಮಹಾಪ್ರಭು, ಮದುಮಗನು ಒಂದು ಗಂಟೆಯ ಕೆಳಗೆ ಮೆಟ್ಟಿಲು ಇಳಿಯುತ್ತಿರುವಾಗ ಕಾಲು ಜಾರಿ, ಸೊಂಟ ಮುರಿದುಕೊಂಡು ಮರಣಿಸಿದನು. ಎಲ್ಲರಿಗೂ ಈ ವಿಷಯ ತಿಳಿಯುವ ಮೊದಲು ನಾನು ರಹಸ್ಯವಾಗಿ ಅವನ ದಹನ ಮಾಡಿಸಿದೆ. ಈ ಮಾತ್ರಕ್ಕೆ ರಾಜಕುಮಾರಿಯ ಮದುವೆ ನಿಲ್ಲಬೇಕಾದ ಪ್ರಮೇಯವಿಲ್ಲ. ಹವಳದ್ವೀಪದ ರಾಜಕುಮಾರನಿಗೆ ರಾಜಕುಮಾರಿಯನ್ನು ಕೊಟ್ಟು ವಿವಾಹಮಾಡಿ. ಈಡುಜೋಡು ಸೊಗುಸಾಗಿರುತ್ತದೆ." ಎಂದು ಸಲಹೆಕೊಟ್ಟಳು.

ರಾಜನು ಅದೇ ಪ್ರಕಾರ ಮದುವೆ ಮತ್ತೂ ಪಟ್ಟಾಭಿಷೇಕ ಮಾಡಿಸಿದನು.



# ಕಾಗೆ - ಗೂಗೆ

ಬ್ರಹ್ಮದೇವನೊಮ್ಮೆ ಜಂತುಗಳನ್ನೆಲ್ಲಾ ಕರೆದು "ಮನುಷ್ಯರು ಕ್ರಮವಾದ ಪರಿಪಾಲನೆಯಿಂದ ಸುಖವಾಗಿ ಜೀವಿಸಲಿಕ್ಕಾಗಿ ರಾಜರನ್ನು ಏರ್ಪಡಿಸಿಕೊಂಡಿದ್ದಾರೆ. ನೀವುಕೂಡಾ ಒಬ್ಬ ರಾಜನನ್ನು ಗೊತ್ತು ಮಾಡಿಕೊಳ್ಳಿ" ಎಂದು ಸೂಚನೆ ಮಾಡಿದ. ಕೂಡಲೇ ಮೃಗಗಳೆಲ್ಲಾ ಕೂಡಿಕೊಂಡು ಸಿಂಹವನ್ನು ಮೃಗರಾಜನನ್ನಾಗಿ ಮಾಡಿಕೊಂಡುವು.

ಅದೇವಿಧವಾಗಿ ಸಮುದ್ರದಲ್ಲಿರುವ ಮೀನುಗಳೆಲ್ಲಾ ಸೇರಿ ಆನಂದನೆಂಬ ಮೀನನ್ನು ರಾಜನನ್ನಾಗಿ ಮಾಡಿಕೊಂಡುವು. ಆದರೆ ಪಕ್ಷಿಗಳು ಅಂತಹ ಪ್ರಯತ್ನವನ್ನೇನೂ ಮಾಡಲಿಲ್ಲ. ಇದನ್ನು ನೋಡಿ ಬ್ರಹ್ಮದೇವನು, "ನೀವೂ ನಿಮ್ಮೊಳಗೆ ಒಬ್ಬ ರಾಜನನ್ನು ಗೊತ್ತುಮಾಡಿಕೊಳ್ಳುವುದು ಒಳ್ಳೆಯದು" ಎಂದು ಹೇಳಿದ.

ಸರಿಯೆಂದು ಪಕ್ಷಿಗಳೆಲ್ಲಾ ಸಭೆ ಸೇರಿದುವು. ರಾಜನಾಗಿರಲಿಕ್ಕೆ ಗೂಗೆ ಯಾಗಬಹುದೆಂದರು ಯಾರೋ.

ಇದಕ್ಕೆ ಕಾಗೆ ಅಭ್ಯಂತರ ಹೇಳಿತು. "ಮೊದಲೇ ಅಷ್ಟಗಲದ ಮೂತಿ! ಅದರಲ್ಲಿ ಕೋಪವೂ ಬಂದುಬಿಟ್ಟರೆ ನೋಡೋದು ಹೇಗೆ? ಗೂಗೆ ರಾಜನಾಗಲಿಕ್ಕೆ ನಾನೆಷ್ಟುಮಾತ್ರಕ್ಕೂ ಒಪ್ಪಲಾರೆ" ಎಂದಿತು ಕಾಗೆ.

ಇದನ್ನು ಕೇಳಿ ಗೂಗೆ ಕಾಗೆಯನ್ನು ಓಡಿಸುತ್ತಾ ಹೋಯಿತು. ಸಭೆ ಚದರಿತು. ಅಂದಿನಿಂದ ಕಾಗೆಗಳಿಗೂ ಗೂಗೆಗಳಿಗೂ ಬದ್ಧದ್ವೇಷ.



# ನಾವಿಕ ಸಿಂದಬಾದ್

ನಮಗೆ ಸಂಕಷ್ಟಗಳು ಪ್ರಾಪ್ತವಾದಾಗ ಅವನ್ನು ಹೇಗೆ ತಾಳುವೆವೋ, ಯಾವಾಗ ಈ ಕಷ್ಟಗಳಿಂದ ಪಾರಾಗುವೆವೋ ಎಂದು ಚಿಂತಿಸುವುದುಂಟು. ಆದರೆ ಅವು ಮಾಯವಾಗಿ ಸುದಿನಗಳು ಬಂದನಂತರ ಹಿಂದೆ ಅನುಭವಿಸಿದ ಕಷ್ಟಗಳಲ್ಲಿ ಯಾವುದೋ ಒಂದು ರೀತಿಯ ಆನಂದ ಕಾಣಬರುವುದುಂಟು. ಇಷ್ಟಕ್ಕೆಲ್ಲಾ ನಾವೇಕೆ ಭಯಗೊಂಡೆವು ಎಂದು ನಮಗೆ ಅನ್ನಿಸುವುದುಂಟು.

ನಾನು ಮೂರು ಭಯಂಕರ ಕಡಲು ಪ್ರಯಾಣಗಳನು ಮಾಡಿ, ಮನೆಯಲ್ಲಿ ಸುಖ ಸಂತೋಷಗಳಲ್ಲಿ ಮುಳುಗಿದ್ದರೂ ಸಹ ಏನೋ ಒಂದುವಿಧವಾದ ಅತೃಪ್ತಿ ಕಾಣಿಸುತಿತ್ತು. ಕೊರತೆ ಕಾಣಿಸುತಿತ್ತು. ಈ ವೈಭೋಗಗಳಲ್ಲಿ ಮುಳುಗಿ ತೇಲುವುದಕ್ಕಿಂತಲೂ ಮತ್ತೆ ಪ್ರಪಂಚ ಪರ್ಯಟನೆ ಮಾಡಿ ಹೊಸ ಅನುಭವಗಳನ್ನು ಸಂಪಾದಿಸುವುದು ಉತ್ತಮವೆಂದು ತೋರಿತು. ವ್ಯಾಪಾರ ಮಾಡಿ ಮತ್ತಷ್ಟು ಹಣ ಗಳಿಸುವ ಯೋಚನೆಯುಂಟಾಯಿತು. ಈ ಆಶೆ ಕ್ರಮೇಣ ಪ್ರಬಲಿಸಿ, ಕೊನೆಗೆ ನಾನು ಒಂದು ಕ್ಷಣವಾದರೂ ಮನೆಯಲ್ಲಿ ನಿಲ್ಲಲಾರದಾದೆ. ತಿರುಗುವ ಕಾಲು, ತೆಗಳುವ ಬಾಯಿ, ಸುಮ್ಮನಿರುವುದಿಲ್ಲವೆಂದು ಪ್ರಾಯಶಃ ಇದಕ್ಕೆ ಹೇಳಿರಬಹುದು. ವಿಧಿ ಓಡಿಸಿದಂತೆ ನಾನು ಒಂದು ದಿನ ಮನೆ ಮಠ, ಆಸ್ತಿ ಪಾಸ್ತಿಗಳನ್ನು ತೊರೆದು, ಹಿಂದಿನೆಲ್ಲ

## ನಾಲ್ಕನೇ ಪ್ರಯಾಣ

CHITRA

ಸಾರಿಗಿಂತಲೂ ಬಹಳ ಬೆಲೆಬಾಳುವ ಸರಕು ಗಳನ್ನು ಕೊಂಡು ಅವುಗಳೊಂದಿಗೆ ಬಸ್ರಾ ಸೇರಿ ಕೊಂಡೆನು. ಅಲ್ಲೊಂದು ಭಾರಿ ಹಡಗನ್ನು ಹತ್ತಿದೆ. ಆ ಹಡಗಿನಲ್ಲಿ ಅನೇಕ ಜನ ಬಸ್ರಾ ದೇಶದ ವರ್ತಕರು ಪ್ರಯಾಣ ಬೆಳೆಸುತ್ತಿದ್ದರು.

ಅದು ಬಹಳ ವೇಗವಾಗಿ ಹೋಗುವ ಹಡಗು. ಅದು ಅನೇಕ ದ್ವೀಪ ಮತ್ತು ದೇಶ ಗಳಿಗೆ ಭೇಟಿ ಕೊಟ್ಟಿತು. ಹಡಗು ಲಂಗರು ಹಾಕಿದ ಸ್ಥಳಗಳಲ್ಲೆಲ್ಲಾ ವ್ಯಾಪಾರ ಬಹಳ ಚುರುಕಾಗಿ ನಡೆಯಿತು. ನನಗೆ ಅಮಿತ ಲಾಭ ಬಂದಿತು. ಆದರೆ ಇದ್ದಕ್ಕಿದ್ದಂತೆ ಒಂದು ದಿನ ಹಡಗು ಮಧ್ಯೆ ಸಮುದ್ರದಲ್ಲಿರಲು ಸರಂಗು "ಓ ಅಲ್ಲಾ, ಇನ್ನೇನು ಗತಿ. ನಮ್ಮ ಕೆಲಸ ಮುಗಿಯಿತು." ಎಂದು ಗದ್ಗದಿತನಾಗಿ ನುಡಿದ. ಆ ಕೂಡಲೇ ಬಾರಿ ಬಿರುಗಾಳಿ ಬೀಸಿತು. ದೊಡ್ಡ ದೊಡ್ಡ ಅಲೆಗಳು ತೀವ್ರವಾಗಿ ನೌಕೆ ಯನ್ನು ಬಡಿಯಲಾರಂಭಿಸಿದುವು. ಸ್ವಲ್ಪಹೊತ್ತಿ ಗೆಲ್ಲಾ ಅಲೆಗಳ ಧಾಳಿಗೆ ತಡೆಯಲಾರದೆ ಆ ನೌಕೆ ಚೂರು ಚೂರಾಯಿತು. ನೌಕೆಯಲ್ಲಿದ್ದ ಸರಕೆಲ್ಲಾ ನೀರುಪಾಲಾಯಿತು. ವರ್ತಕರಲ್ಲಿ ಅನೇಕರು ತಮ್ಮ ಸರಕುಗಳೊಂದಿಗೆ ಸಮುದ್ರ ದಲ್ಲಿ ಸಮಾಧಿಯಾದರು.

ದೈವಕೃಪೆಯಿಂದ ನಾನು ಮತ್ತು ಇತರ ಕೆಲವು ವರ್ತಕರು ಒಂದು ದೊಡ್ಡ ಹಲಗೆ ಯನ್ನು ಆಶ್ರಯಿಸಿದೆವು. ಅಲೆಗಳು ನಮ್ಮನ್ನು ಆಹೊತ್ತೆಲ್ಲಾ ಅತ್ತಿತ್ತ ಓಡಾಡಿಸಿದುವು. ತರು ವಾಯ ಗಾಳಿ ನಮ್ಮನ್ನು ಒಂದು ದ್ವೀಪದ ತೀರಕ್ಕೆ ಸೇರಿಸಿತು. ನಾವೆಲ್ಲ ಅಲೆಗಳ ಹೊಡೆ





ತಕ್ಕೆ ಸಿಕ್ಕಿ ಬಳಲಿಬೇಸತ್ತಿದ್ದೆವು. ಅಂದು ರಾತ್ರಿಯೆಲ್ಲಾ ಸಮುದ್ರತೀರದ ಮರಳಿನಲ್ಲಿ ಎಲ್ಲಿ ಬಿದ್ದವರಲ್ಲೇ ನಿದ್ರೆಹೋದೆವು.

ಬೆಳಗ್ಗೆ ಏಳುವ ವೇಳೆಗೆ ನಮಗೆ ತುಸ ಶಕ್ತಿ ಬಂದಂತಾಯಿತು. ಅದರಿಂದ ನಾವೆಲ್ಲರೂ ಒಳಪ್ರಾಂತವನ್ನು ನೋಡಲು ಮುಂದೆ ನಡೆದೆವು. ಕೊಂಚದೂರ ಹೋಗಲು ನಮಗೊಂದು ಭವನ ಕಾಣಿಸಿತು. ಆ ಭವನದಲ್ಲಿ ಅನೇಕ ಜನ ಕಪ್ಪನೆಯ ವ್ಯಕ್ತಿಗಳು ಓಡುತ್ತಾ ನಮ್ಮಕಡೆ ಬಂದರು. ಅವರು ಮೃಗಗಳ ಚರ್ಮದಿಂದ ಮೈ ಮುಚ್ಚಿಕೊಂಡಿದ್ದರು. ಅವರು ಒಂದು ಮಾತನ್ನಾದರೂ ಸಹ ಆಡದೆ ನಮ್ಮನ್ನು ಆ ಭವನದಲ್ಲಿದ್ದ ವಿಶಾಲವಾದ ಪಡಸಾಲೆಗೆಯೊಳಗೆ ಕರೆದುಕೊಂಡು ಹೋದರು.

ಅಲ್ಲೊಂದು ಎತ್ತರವಾದ ಆಸನದಮೇಲೆ ಅವರ ರಾಜ ಕುಳಿತ್ತಿದ್ದನು. ಆತನು ನಮ್ಮನ್ನು ಕುಳಿತುಕೊಳ್ಳುವಂತೆ ಸನ್ನೆ ಮಾಡಿದನು.

ಕ್ಷಣದಲ್ಲಿ ಆ ಕಪ್ಪನೆಯ ವ್ಯಕ್ತಿಗಳು ನಮ್ಮ ಮುಂದೆ ತಟ್ಟೆಗಳಲ್ಲಿ ನಾವೆಂದೂ ಕಂಡೂ ಕಾಣದಂತಹ ವಿವಿಧ ಪದಾರ್ಥಗಳಿಂದ ಭೋಜನ ವಿಟ್ಟರು. ಅದೇಕೋ ನನಗೆ ಅದನ್ನು ಮುಟ್ಟಲೂ ಸಹ ಮನಬರಲಿಲ್ಲ. ಆದರೆ ನನ್ನ ಸಂಗಡಿಗರು ಬಹಳ ಹಸಿದಿದ್ದರು. ಅವರು ತುಸವಾದರೂ ಸಂದೇಹಪಡದೆ ಅದನ್ನೆಲ್ಲಾ ತಿಂದುಬಿಟ್ಟರು. ಅವರು ಬಡಿಸಿದ ಆಹಾವನ್ನು ತಿನ್ನದಿದ್ದುದು ಒಳಿತಾಯಿತೆಂದು ನನಗೆ ಅನಂತರ ತಿಳಿಯಿತು. ನನ್ನ ಮಿತ್ರ ವರ್ತಕರ ಕ್ಷುದ್ಬಾಧೆ ಆಹಾರ ತಿಂದಂತೆ ಹೆಚ್ಚಾಗುತಿತ್ತು. ಅವರು ಗಂಟೆಗಟ್ಟಳೆ ತಮ್ಮ ತಟ್ಟೆಗಳಲ್ಲಿ ಬಡಿಸಿದ ಪದಾರ್ಥಗಳನ್ನೆಲ್ಲಾ ತಿನ್ನಲಾರಂಭಿಸಿದರು. ಅವರು ತಿನ್ನುತ್ತಿದ್ದ ಧೋರಣೆ ನೋಡಿ ನನಗೆ ತುಂಬಾ ಆಶ್ಚರ್ಯವೂ ಅಸಹ್ಯವೂ ಆಯಿತು. ಆಗಿನ ಅವರ ಸ್ಥಿತಿಗೂ ಮೃಗಗಳ ಸ್ಥಿತಿಗೂ ಯಾವ ವ್ಯತ್ಯಾಸವೂ ಕಾಣಬರುತ್ತಿರಲಿಲ್ಲ.

ಅವರೊಂದುಕಡೆ ತಿನ್ನುತ್ತಿರಲು, ಆ ಕರಿಯ ಜನರು ಒಂದು ಜಾಡಿಯಲ್ಲಿ ಯಾವುದೋ ಎಣ್ಣೆ ತಂದು ಅವರ ಶರೀರಕ್ಕೆ ಲೇಪಿಸಲು ಪ್ರಾರಂಭಿಸಿದರು. ಓ, ಅದರ ಪ್ರಭಾವ ನೋಡಬೇಕು. ನನ್ನ ಮಿತ್ರರ ಹೊಟ್ಟೆಗಳು ಕ್ರಮೇಣ ಒಂದೊಂದು ಅಂಗುಲದಂತೆ ಬೆಳೆಯುತ್ತಿರುವುದನ್ನು ಕಂಡು ನಾನು ವಿಸ್ಮಿತನಾದೆ. ಗುಡಾಣ

ದಂತೆ ಅವರ ಹೊಟ್ಟೆ ಬೆಳೆಯುತ್ತಿರಲು ಅವರ ಹಸಿವೂ ವಿಪರೀತವಾಗುತಿತ್ತು. ಅವರ ಹಸಿವು ತೀರುವಂತಿರಲಿಲ್ಲ. ಇದನ್ನು ಕಂಡು ನಾನು ಬೆಕ್ಕಸಬೆರಗಾದೆ.

ಇದೆಲ್ಲಾ ಕಣ್ಣಾರೆ ಕಂಡನಂತರ ನಾನು ಹೇಗೆ ಊಟಮಾಡಲಿ? ನನ್ನ ಶರೀರಕ್ಕೆ ಲೇಪನ ಹಚ್ಚಲು ಅವರಿಗೆ ಅವಕಾಶ ಕೊಡಲಿಲ್ಲ. ನಾನು ಅವಕಾಶ ಕೊಡದಿದ್ದುದು ಉತ್ತಮವೆನಿಸಿತು. ಏಕೆಂದರೆ ಇವರೆಲ್ಲ ನರಭಕ್ಷಕರೆಂದೂ, ಮಾನವರನ್ನು ಕೊಂದು ತಿನ್ನಲು ಅವರು ಈ ರೀತಿ ಅವರನ್ನು ಕೊಬ್ಬಿಸುವರೆಂದೂ ನಾನು ನಂತರ ಗ್ರಹಿಸಿದೆ.

ಇನ್ನೊಂದು ವಿಷಯವೇನೆಂದರೆ ಇವರ ರಾಜನು ದಿನಾ ಒಬ್ಬೊಬ್ಬ ಮಾನವನನ್ನು ಸುಟ್ಟು ತಿನ್ನುವನು. ಇವರುಮಾತ್ರ ಮನುಷ್ಯರನ್ನು ಹಾಗೇ ಕಿತ್ತು ತಿನ್ನುವರು.

ಈ ವಿಷಯ ನನಗೆ ತಿಳಿದಕೂಡಲೇ ನನ್ನ ಮತ್ತು ನನ್ನ ಮಿತ್ರರ ಗತಿ ಏನಾಗುವುದೋ ಎಂದು ಹೆದರಿದೆ. ನನ್ನ ಮಿತ್ರರ ಹೊಟ್ಟೆ ಉಬ್ಬುತ್ತಿದ್ದಂತೆ ಅವರ ಬುದ್ಧಿಶಕ್ತಿ ಕ್ಷೀಣಿಸುತ್ತಿರುವಂತೆ ತೋರಿತು. ಕೊನೆಗವರು ತೀರಾ ಮೃಗಗಳಂತಾದರು. ಆ ಕಪ್ಪುಜನರು ಅವರನ್ನು ಮೃಗಗಳಂತೆಯೇ ಮೇಯಿಸಲು ಬಯಲಿಗೆ ಅಟ್ಟಿಕೊಂಡು ಹೋದರು.

ನಾನು ಭಯದಿಂದ. ಹಸಿವಿನಿಂದ ಸೊರಗಿ ಕಡ್ಡಿಯಾದೆ. ಮೂಳೆಗಳಿಗೆ ಅಂಟಿಕೊಂಡು ನಾನು ಅಸಹ್ಯವಾಗಿ ಕಾಣುತ್ತಿದ್ದೆ. ಅಲ್ಲಿನ ಜನರಿಗೆ ನನ್ನಮೇಲೆ ತುಸವಾದರೂ ಆಸಕ್ತಿಯಿದ್ದಂತೆ ತೋರಲಿಲ್ಲ. ಅವರು ನನ್ನ ಮಾತೇ ಮರೆತುಬಿಟ್ಟರು.




ಸಮಯ ನೋಡಿ ನಾನು ಒಂದು ದಿನ ಆ ಭವನದಿಂದ ತಪ್ಪಿಸಿಕೊಂಡು ಹೊರಬಿದ್ದೆ. ದಾರಿಯಲ್ಲಿ ನನಗೆ ನನ್ನ ಮಿತ್ರರನ್ನು ಅಟ್ಟಿಕೊಂಡು ಹೋಗುತ್ತಿದ್ದ ಕಪ್ಪನೆಯ ವ್ಯಕ್ತಿಗಳು ಕಾಣಬಂದರು. ನಾನು ತಕ್ಷಣ ಬೆಕ್ಕಿನಹಾಗೆ ಮರಗಳ ಮರೆಗೆ ಹೋಗಿ ಅವರ ಕಣ್ಣಿಗೆ ಬೀಳದೆ ತಪ್ಪಿಸಿಕೊಂಡೆ.

ನಾನು ಎಲ್ಲೂ ನಿಲ್ಲದೆ ಆ ರಾತ್ರಿಯೆಲ್ಲಾ ಒಂದೇಸವನೆ ಮುಂದೆ ನಡೆದೆ. ನರಭಕ್ಷಕರಿಂದ ತಪ್ಪಿಸಿಕೊಳ್ಳುವ ಆತುರದಲ್ಲಿ ನನಗೆ ನಿದ್ದೆಸಹ ಬರಲಿಲ್ಲ. ಹಾದಿಯಲ್ಲಿ ಕಂದಮೂಲಗಳನ್ನು

ತಿಂದು, ಆರು ದಿನ ಏಕಪ್ರಕಾರವಾಗಿ ನಡೆದು ನಡೆದು ಕೊನೆಗೆ ನನ್ನಂತೆಯೇ ಮಾನವರಿದ್ದ ದೇಶವನ್ನು ಸೇರಿಕೊಂಡೆ.

ಅವರು ನಮ್ಮ ಭಾಷೆಯಲ್ಲೇ ಸಂಭಾಷಣೆ ನಡೆಸುತ್ತಿದ್ದರು. ನನ್ನನ್ನು ಕಂಡಕೂಡಲೇ ನನ್ನಬಳಿಗೆ ಓಡಿಬಂದರು. ನಾನು ನಮ್ಮ ಭಾಷೆಯನ್ನು ಕೇಳಿ ಅನೇಕ ದಿನಗಳಾಗಿದ್ದುವು. ಅವರೊಂದಿಗೆ ನನ್ನ ಕತೆಯನ್ನೆಲ್ಲಾ ಹೇಳಿದೆ. ಅವರು ನಾನು ಪ್ರಾಣದೊಂದಿಗೆ ಹೊರಬಿದ್ದುದಕ್ಕೆ ನನ್ನನ್ನು ಅಭಿನಂದಿಸಿ, ನನಗೆ ಅನ್ನ ಪಾನಾದಿಗಳನ್ನು ಕೊಟ್ಟು ಉಪಚಾರ ಮಾಡಿದರು. ಸ್ವಲ್ಪಹೊತ್ತು ವಿಶ್ರಾಂತಿ ತೆಗೆದುಕೊಂಡ ನಂತರ ಅವರು ನನ್ನನ್ನು ತಮ್ಮ ಹಡಗಿನಲ್ಲೇರಿಸಿಕೊಂಡು ಅವರ ರಾಜನ ಬಳಿಗೆ ಕರೆದುಕೊಂಡು ಹೋದರು. ಆ ರಾಜನು ಮತ್ತೊಂದು ದ್ವೀಪದಲ್ಲಿ ವಾಸಿಸುತ್ತಿದ್ದನು.

ರಾಜಧಾನಿಯಲ್ಲಿ ಜನಸಮುದಾಯ ಹೆಚ್ಚಾಗಿತ್ತು. ಅಂಗಡಿಗಳಲ್ಲಿ ಬಗೆಬಗೆಯ ಸರಕುಗಳು ತುಂಬಿದ್ದುವು. ಬೀದಿಗಳು ವಿಶಾಲವಾಗಿ, ಶುಚಿಯಾಗಿದ್ದುವು. ಬೀದಿಗಳಲ್ಲಿ ಅನೇಕರು ಉತ್ತಮ ಜಾತಿಯ ಅಶ್ವಗಳಮೇಲೆ ಜೀನುಗಳಿಲ್ಲದೆ ಸವಾರಿ ಮಾಡುತ್ತಿರುವುದನ್ನು ಕಂಡೆ.

ನಾನು ರಾಜನನ್ನು ಭೇಟಿಮಾಡಿ "ನಿಮ್ಮ ದೇಶದಲ್ಲಿ ರಾಹುತರು ಜೀನುಗಳಿಲ್ಲದೆ ಕುದುರೆಗಳ ಮೇಲೆ ಸವಾರಿಮಾಡಲು ಕಾರಣವೇನು? ಸವಾರಿಮಾಡಲು ಜೀನು ಇದ್ದರೆ ಮತ್ತಿಷ್ಟು ಹಾಯೆನಿಸುವುದಿಲ್ಲವೆ? ಇದು ನಿಮಗೆ ಗೊತ್ತಿಲ್ಲವೆ?" ಎಂದೆ.



"ಜೀನು? ಹಾಗೆಂದರೇನು? ಅದನ್ನು ನಾವೆಂದೂ ನೋಡಿಲ್ಲವಲ್ಲಾ" ಎಂದು ರಾಜನು ಆಶ್ಚರ್ಯ ಸೂಚಿಸಿದ.

"ಹಾಗಾದರೆ ಅಪ್ಪಣೆ ಕೊಡಿ. ನಾನು ಸಿದ್ಧ ಪಡಿಸಿ ಕೊಡುವೆನು. ಅದರಲ್ಲಿರುವ ಸೌಕರ್ಯ ತಮಗೇ ವೇದ್ಯವಾಗುವುದು" ಎಂದ.

ರಾಜನು "ಸರಿ" ಎಂದ. ಒಬ್ಬ ಕುಶಲ ಬಡಗಿಯ ಬಳಿಗೆ ಹೋಗಿ ಅವನಿಂದ ಒಂದು ಮರದಜೀನು ತಯಾರುಮಾಡಿಸಿದೆ. ತರುವಾಯ ಅದಕ್ಕೆ ಪುಕ್ಕಗಳಿಂದ ಮಾಡಿದ ಮೆತ್ತೆಯನ್ನು ಹೊಲಿಸಿ, ಚರ್ಮದ ಹಲ್ಲಣ, ಜರತಾರಿ ಅಂಚು, ಬಣ್ಣಬಣ್ಣದ ಕುಚ್ಚುಗಳನ್ನು ಕಟ್ಟಿ ಅಲಂಕಾರ ಮಾಡಿಸಿದೆ. ಅನಂತರ ಒಬ್ಬ ಕಮ್ಮಾರನಬಳಿಗೆ ಹೋಗಿ ಕಡಿವಾಣ ಮತ್ತು ಎರಡು ರಿಕಾಬುಗಳನ್ನು ಮಾಡಿಸಿದೆ. ನಾನು ಅವನೊಂದಿಗೇ ಇದ್ದೆನಾದುದರಿಂದ ಕೆಲಸವನ್ನು ಸಮರ್ಪಕವಾದ ರೀತಿಯಲ್ಲಿ ಮಾಡಿಕೊಟ್ಟ.

ಎಲ್ಲವೂ ಸಿದ್ಧವಾದನಂತರ ನಾನು ಅಶ್ವಶಾಲೆಗೆ ಹೋಗಿ ಅಲ್ಲಿದ್ದ ಕುದುರೆಗಳಲ್ಲಿ ಉತ್ತಮವಾದ ಅಶ್ವವನ್ನು ಆರಿಸಿ, ಅದಕ್ಕೆ ಜೀನು, ಕಡಿವಾಣ ತಗಲಿಸಿದೆ. ಅದರ ಕೊರಳಿಗೆ ನೀಲಿ ಬಣ್ಣದ ಕುಚ್ಚುಗಳನ್ನು ಕಟ್ಟಿದೆ. ನಂತರ ಅದನ್ನು ರಾಜನಬಳಿಗೆ ತೆಗೆದುಕೊಂಡು ಹೋದೆ. ಮಹಾರಾಜನು ಕುದುರೆಯ ಮೇಲೆ ಸವಾರಿ ಮಾಡಿ ಜೀನಿನಿಂದ ಆಗುವ ಸೌಕರ್ಯ, ಕುದುರೆಯನ್ನು ನಡೆಯಿಸುವ ರೀತಿಯಲ್ಲಿರುವ ನವೀನತೆ ತಿಳಿದು ನನಗೆ ಅನೇಕ ಉಡುಗೊರೆಗಳನ್ನು ಕೊಟ್ಟು ಸನ್ಮಾನಿಸಿದನು.



ತರುವಾಯ ಸಚಿವರು ನನ್ನನ್ನು ಕರೆಯ ಕಳುಹಿಸಿ ತಮಗೂ ಅಂತಹದೊಂದು ಜೀನು ಸಿದ್ಧಪಡಿಸಿಕೊಡಬೇಕೆಂದು ಕೇಳಿದರು. ನಾನು ಅವರಿಗೂ ಒಂದು ಮಾಡಿಕೊಟ್ಟೆ. ಅಂದಿನಿಂದ ಆ ದೇಶದಲ್ಲಿದ್ದ ಪ್ರತಿಯೊಬ್ಬ ಗಣ್ಯ ಮಹನೀಯನೂ ನನ್ನಿಂದ ಜೀನುಗಳನ್ನು ತಯಾರು ಮಾಡಿಸಿಕೊಂಡು ನನಗೆ ಅಪಾರ ಹಣಕೊಟ್ಟರು. ಸ್ವಲ್ಪ ಕಾಲದೊಳಗೇ ನಾನು ಆ ದೇಶದಲೆಲ್ಲಾ ಅತ್ಯಂತ ಧನಿಕನಾದೆನು.

ರಾಜನಿಗೂ ನನಗೂ ಗಾಢವಾದ ಮೈತ್ರಿ ಬೆಳೆಯಿತು. ಒಂದು ದಿನ ಆತನು "ನೋಡು ಸಿಂದಬಾದ್, ನೀನು ನನ್ನ ಆಪ್ತರಲೆಲ್ಲಾ ಅಗ್ರಗಣ್ಯ. ನೀನು ಪರದೇಶವನೆಂಬ ಭಾವನೆ ನನ್ನಲ್ಲಿ ತುಸವಾದರೂ ಇಲ್ಲ. ನೀನು ನನ್ನ ಕೋರಿಕೆಯೊಂದನ್ನು ನಡೆಯಿಸಿಕೊಡಬೇಕು." ಎಂದನು.

"ಮಹಾಸ್ವಾಮಿಯವರು ಹೇಳಿದ ಮಾತಿಗೆ ಪ್ರತ್ಯುತ್ತರವುಂಟೆ? ಅಪ್ಪಣೆ ಕೊಡಿ" ಎಂದೆ.

"ಹಾಗಾದರೆ ನೀನೊಬ್ಬ ಅಂದವಾದ ಕನ್ಯೆಯನ್ನು ಮದುವೆಯಾಗಬೇಕು. ಆಕೆ ಉತ್ತಮ ವಂಶದಾಕೆ. ಬಹಳ ಶ್ರೀಮಂತಳು. ಆಕೆಯನ್ನು ವಿವಾಹವಾದರೆ ನೀನು ಸದಾ ಇಲ್ಲೆ ಇರುವೆಯೆಂದು ನನ್ನ ಆಸೆ. ನನ್ನ ಸೂಚನೆಯನ್ನು ನಿರಾಕರಿಸಬೇಡ" ಎಂದ ರಾಜ.

ನನಗೇನು ಹೇಳಬೇಕೋ ಹೊಳೆಯದಾಯಿತು. ನನ್ನ ತಲೆಯೆಲ್ಲಾ ಕೆಟ್ಟುಹೋಯಿತು. ನಾನು ಆತನ ಮುಖವನ್ನು ನೋಡಲಾರದೆ ತಲೆ ಬಗ್ಗಿಸಿದೆ.

"ಮಾತಾಡೋಲ್ಲವೇಕಯ್ಯಾ" ಎಂದ ರಾಜ.

"ಮಹಾಪ್ರಭು, ನಾನು ನಿಮ್ಮ ಗೆಳೆಯ. ನಿಮ್ಮಿಷ್ಟದಂತೆ ನೆರವೇರಲಿ" ಎಂದೆ.

ಕೂಡಲೇ ಆತನು ವಧುವನ್ನು ಕಾಜಿಯನ್ನು ಮತ್ತು ಸಾಕ್ಷಿಗಳನ್ನು ಕರೆಯಿಸಿ, ನನ್ನ ವಿವಾಹವನ್ನು ಮಾಡಿಸಿದ. ಆಕೆ ಅಂದಗಾತಿ ಮಾತ್ರವೇ ಅಲ್ಲ ಬಹಳ ಸಂಪನ್ನಳು ಹೌದು. ಆಕೆಗೆ ಅನೇಕ ಭವನಗಳು, ವಸ್ತು ವಾಹನಗಳು, ಭೂಮಿಕಾಣಿಗಳೂ ಇದ್ದುವು. ಮಹಾರಾಜನು ನಾವು ವಾಸಿಸಲು ಒಂದು ದಿವ್ಯ ಭವನವನ್ನೂ, ಅನೇಕಮಂದಿ ಆಳುಕಾಳುಗಳನ್ನೂ ಗಂಡು ಹೆಣ್ಣು ಗುಲಾಮರನ್ನೂ ಕೊಟ್ಟನು.

(ಇನ್ನೂ ಇದೆ)





# ಪುತ್ರವಾತ್ಸಲ್ಯ

ಒಂದಾನೊಂದು ಕಾಲದಲ್ಲಿ ಪಾಟಲಿಪುತ್ರವನ್ನು ಶೂರವರ್ಮನೆಂಬಾತನು ಪಾಲಿಸುತ್ತಿದ್ದನು. ಅವನೊಬ್ಬ ಕಠಿನಾತ್ಮನಾಗಿದ್ದನು. ಯುದ್ಧರಂಗದಲ್ಲಿ ಅವನೆಷ್ಟು ಪರಾಕ್ರಮ ತೋರುತ್ತಿದ್ದನೋ ಅಷ್ಟೇ ಕ್ರೂರವಾಗಿ ಸೋತವರಬಗ್ಗೆ ವರ್ತಿಸುತ್ತಿದ್ದನು. ಅವನ ಆಳ್ವಿಕೆಯಲ್ಲಿ ಅಪರಾಧಿಗಳಿಗೆ ಮರಣದಂಡನೆ ವಿಧಿಸಲ್ಪಡುತ್ತಿತ್ತು. ಅಂತಹವರನ್ನು ಗಲ್ಲಿಗೇರಿಸುವ ಅಥವಾ ಶಿರಚ್ಛೇದಮಾಡಿಸುವಬದಲಾಗಿ ಶೂರವರ್ಮನು ಅವರನ್ನು ಹುಲಿ ಸಿಂಹಗಳೊಂದಿಗೆ ಕಾದಾಡಲು ಬಿಡುತ್ತಿದ್ದನು. ಅವುಗಳಿಂದ ಅವರನ್ನು ಕೊಲ್ಲಿಸುವ ಮೋಜು ಅವನಿಗಿತ್ತು.

ಅವನಷ್ಟು ಕ್ರೂರಿಯಾಗಿದ್ದರೂ ಮಗನೆಂದರೆ ಅಪಾರ ಪ್ರೇಮ, ಮಮತೆ. ಅವನಿಗೆ ಒಬ್ಬನೇ ಮಗ. ಅವನ ಹೆಸರು ಚಂದ್ರವರ್ಮ. ತಂದೆ ಎಷ್ಟು ನಿಷ್ಠುರನೋ ಅಷ್ಟೇ ಕರುಣಾಳು ಚಂದ್ರವರ್ಮ. ಯಾರ ಮನಸ್ಸಿಗೆ ವ್ಯಥೆಯಾದರೂ ಅವನು ನೊಂದುಕೊಳ್ಳುವನು. ಅವನಿಗೆ ಸುಬುದಿ ಎಂಬ ಗೆಳೆಯನಿದ್ದನು. ಇಬ್ಬರೂ ಒಂದೇ ವಯಸ್ಸಿನವರು. ನೋಡಲು ಇಬ್ಬರೂ ಅವಳಿ ಮಕ್ಕಳಂತೆ ಕಾಣುತ್ತಿದ್ದರು.

ಚಂದ್ರವರ್ಮ ಸುಬುದ್ಧಿಯರು ಸರಿವಯಸ್ಕರು. ಒಬ್ಬ ಗುರುವಿನ ಬಳಿ ವ್ಯಾಸಂಗ ಮಾಡಿದರು, ಅಸ್ತ್ರವಿದ್ಯೆ ಕಲಿತುಕೊಂಡರು. ಅವರಿಗೆ ಇಪ್ಪತ್ತು ವರ್ಷಗಳಿರುವಾಗ ಶೂರವರ್ಮನು ಜಯಂತದೇಶದ ಮೇಲೆ ದಂಡೆತ್ತಿ ಹೋಗಬೇಕಾಗಿ ಬಂದಿತು. ಆಗ ತನ್ನೊಂದಿಗೆ ತನ್ನ ಮಗ ಚಂದ್ರವರ್ಮ ಮತ್ತು ಅವನ ಗೆಳೆಯ ಸುಬುದ್ಧಿಯನ್ನು ಸಹ ಕರೆದುಕೊಂಡು ಹೋಗಿದ್ದ. ಚಂದ್ರವರ್ಮನು ಯುದ್ಧದಲ್ಲಿ ಭಾಗವಹಿಸಿದುದು ಅದೇ ಮೊದಲು.

ಯುದ್ಧ ಬೇಗನೇ ಮುಗಿಯಿತು. ಜಯಂತದರಸನಾದ ರಣಜಿತನು ಸಂಪೂರ್ಣವಾಗಿ ಸೋತು, ತನ್ನ ಅರಮನೆಯನ್ನು ತ್ಯಜಿಸಿ ಅಡವಿಗೆ ಓಡಿಹೋಗಿ ಅವಿತಿಟ್ಟುಕೊಂಡನು.

ಅವನು ಅಡಗಿಕೊಂಡಿದ್ದ ಗುಪ್ತಸ್ಥಳ ಕೆಲವು ಮಂದಿಗೆ ಮಾತ್ರ ತಿಳಿದಿತ್ತು. ಶೂರವರ್ಮನು ನಿರಾತಂಕವಾಗಿ ಅರಮನೆಯನ್ನು ಪ್ರವೇ

ಬಿ. ರಾಮಚಂದ್ರಮಣೇಕಾರ





ಎಂದು ಬಹಳ ಸಂತಾಪ ಪಟ್ಟನು. ತನ್ನ ತಂದೆ ಶತ್ರುಗಳೊಂದಿಗೆ ಬಹಳ ಕ್ರೂರವಾಗಿ ವರ್ತಿಸುವನೆಂದು ಅವನಿಗೆ ತಿಳಿದಿತ್ತು. ಊರ್ಮಿಳೆಯನ್ನಾಗಲೀ, ಅವಳ ತಂದೆಯನ್ನಾಗಲೀ ಎಲ್ಲಿ ಸಿಂಹದ ಬಾಯಿಗೆ ಬಲಿಗೊಡುವನೋ ಎಂದು ಅವನು ಭೀತಿಗೊಂಡನು.

ಅವನು ಸಮಯ ಸಾಧಿಸಿ ಊರ್ಮಿಳೆಯಿದ್ದ ಕೋಣೆಗೆ ಹೋಗಿ "ಯುದ್ಧದಲ್ಲಿ ಅಪಜಯವಾದುದಕ್ಕೆ ಚಿಂತಿಸಬೇಡ. ನಿನ್ನ ಕಣ್ಣೀರು ನೋಡಿದರೆ ನನ್ನ ಮನಸ್ಸಿಗೆ ತುಂಬಾ ನೋವಾಗುತ್ತಿದೆ. ನಿನ್ನ ಅವಸ್ಥೆ ನೋಡುವುದಕ್ಕಿಂತ ನಾನು ಯುದ್ಧ ಭೂಮಿಯಲ್ಲಿ ಗಾಯಗೊಂಡು ಬಿದ್ದಿದ್ದರೂ ಚೆನ್ನಿತ್ತು. ನಾನು ಇಷ್ಟು ಸಂಕಟಪಡುತ್ತಿರಲಿಲ್ಲ. ನನ್ನ ತಂದೆ ನನ್ನ ಮಾತನ್ನು ತಳ್ಳಿಹಾಕಲಾರ. ಅವರೊಂದಿಗೆ ಹೇಳಿ, ಉಭಯ ರಾಜ್ಯಗಳ ನಡುವೆ ಗೌರವಪೂರಿತವಾದ ಒಪ್ಪಂದ ಮಾಡಿಸಲು ಪ್ರಯತ್ನಿಸುತ್ತೇನೆ. ಧೈರ್ಯದಿಂದಿರು" ಎಂದು ಧೈರ್ಯ ಹೇಳಿದ.

ಮೊದಲು ಊರ್ಮಿಳೆಗೆ ಚಂದ್ರವರ್ಮನಲ್ಲಿ ಆದರಭಾವ ವುಂಟಾಗಲಿಲ್ಲ. ಏಕೆಂದರೆ ತನ್ನ ತಂದೆಯನ್ನು ಕಷ್ಟಕೋಟಲೆಗಳಿಗೆ ಸಿಲುಕಿಸಿದ್ದ ಶತ್ರುಕೋಟೆಯಲ್ಲಿ ಈ ಚಂದ್ರವರ್ಮನೂ ಒಬ್ಬನಲ್ಲವೇ? ಆದರೆ ಅವನ ಮಾತುಗಳನ್ನು ಕೇಳುತ್ತಿದ್ದಂತೆ ಊರ್ಮಿಳೆಗೆ ಅವನ ವಿಷಯದಲ್ಲಿ ಸದಭಿಪ್ರಾಯವುಂಟಾಯಿತು. ಆಕೆ ಕ್ರಮೇಣ ತನ್ನ ಆಗು ಹೋಗುಗಳ ಭಾರವನ್ನು ಅವನ ಮೇಲೆ ಹೊರಿಸಿದ್ದಳು.

ಶಿಸಿದ ಕೂಡಲೇ ರಣಜಿತನ ಮಗಳಾದ ಊರ್ಮಿಳೆ ಕಣ್ಣೀರು ಸುರಿಸುತ್ತಿರುವ ದೃಶ್ಯ ಅವನ ಕಣ್ಣಿಗೆ ಬಿತ್ತು. ಊರ್ಮಿಳೆ ಅಸಾಧಾರಣ ಅಂದಗಾತಿ. ಜಯಂತದೇಶದ ರಾಜನಿಗೆ ಅವಳೊಬ್ಬಳೇ ಮಗಳು. ಅವಳನ್ನು ಕಂಡು ಶೂರವರ್ಮನಿಗೆ ಅವಳನ್ನು ಮದುವೆಯಾಗಬೇಕೆಂದು ಚಪಲವಾಯಿತು. ತಾನು ಜಯಿಸಿದ ದೊಡ್ಡ ರಾಜ್ಯಕ್ಕಿಂತಲೂ ರಾಜಕನ್ಯೆ ಊರ್ಮಿಳೆಯೇ ಮಿಗಿಲಾದಂತೆ ತೋರಿತು.

ಊರ್ಮಿಳೆಯನ್ನು ಕಂಡಕೂಡಲೇ ಚಂದ್ರವರ್ಮನೂ ಸಹ ಅವಳನ್ನು ಪ್ರೇಮಿಸಿದನು. ಅವಳ ಕಣ್ಣೀರು ಅವನನ್ನು ತುಂಬಾ ವ್ಯಥೆಪಡಿಸಿತು. ಜಯಂತದೇಶದ ರಾಜನನ್ನು ಸೋಲಿಸುವ ಕಾರ್ಯದಲ್ಲಿ ತಾನು ಭಾಗವಹಿಸಿದೆನಲ್ಲಾ









ತನ್ನಂತೆಯೇ ತನ್ನ ಮಗನು ಊರ್ಮಿಳೆಯನ್ನು ಪ್ರೀತಿಸುತ್ತಿರುವನೆಂಬ ವಿಷಯ ಶೂರವರ್ಮನು ಗ್ರಹಿಸಲಿಲ್ಲ. ಆದರೆ ಊರ್ಮಿಳೆ ಚಂದ್ರವರ್ಮನನ್ನು ತನ್ನ ಕಡೆಗೆ ಒಲಿಸಿಕೊಂಡು ತನ್ನ ತಂದೆಗೆ ಅನುಕೂಲವಾಗುವಂತಹ ಸಂಧಾನ ಮಾಡಿಸಲು ಪ್ರಯತ್ನಿಸುತ್ತಿರುವಳೆಂದು ಭಾವಿಸಿದ. ಅವನು ಕೂಡಲೇ ತನ್ನ ಮಗನನ್ನು ಕರೆದು "ಮಗೂ, ರಣಜಿತನು ಪರಾರಿಯಾದ. ಸಂಧಿ ಸಂಪ್ರತಿಗಳು ಮುಂದುವರಿಸಲು ಯಾರೂ ಇಲ್ಲ. ರಣಜಿತನಿಗಾಗಿ ಹುಡುಕಿಸುತ್ತಿರುವೆನು. ಇಲ್ಲಿನ ವ್ಯವಹಾರಗಳು ಇಷ್ಟರಲ್ಲೇ ಮುಗಿಯುವಂತಿಲ್ಲ. ಆದುದರಿಂದ ನೀನು ನಮ್ಮ ಶಿಬಿರಕ್ಕೆ ಹೋಗಿ ಅಲ್ಲಿನ ಪರಿಸ್ಥಿತಿಗಳನ್ನು ನೋಡಿಕೊಂಡಿರು. ಸಂಧಿ ನಡೆಯುವ ಸಮಯದಲ್ಲಿ ನಿನಗೆ ಹೇಳಿ ಕಳುಹಿಸುವೆನು" ಎಂದ.

ಊರ್ಮಿಳೆಯನ್ನು ಬಿಟ್ಟು ತೆರಳಲು ಚಂದ್ರವರ್ಮನಿಗೆ ಮನಸ್ಸಿರಲಿಲ್ಲ. ಆದರೆ ತಂದೆಯ ಆಜ್ಞೆಯನ್ನು ಪಾಲಿಸಲೇ ಬೇಕು. ಅವನು ತನ್ನ ಪ್ರಾಣಸಖನಾದ ಸುಬುದ್ಧಿಯೊಂದಿಗೆ "ಅಣ್ಣಾ, ಊರ್ಮಿಳೆಯನ್ನು ಸಾವಿರ ಕಣ್ಣುಗಳಿಂದ ಜೋಪಾನವಾಗಿ ನೋಡಿಕೊಂಡಿರು. ಆಕೆಗೆ ನಮ್ಮ ಹೊರತು ಅನ್ಯ ದಿಕ್ಕಿಲ್ಲ. ತಂದೆಯವರದು ಕಲ್ಲು ಹೃದಯ. ನಿನಗೆ ಆ ವಿಷಯ ತಿಳಿದಿದೆ. ಆದುದರಿಂದ ಪ್ರತಿದಿನದ ಸಂಗತಿಗಳನ್ನು ಭಟರ ಮೂಲಕ ನನಗೆ ತಿಳಿಸುತ್ತಿರು. ಊರ್ಮಿಳೆಗೆ ಯಾವ ತೊಂದರೆಯೂ ಲಭಿಸದಂತೆ ನೋಡಿಕೊಂಡಿರು. ಆಕೆಗೆ ದುಃಖವುಂಟಾಗದಂತೆ ಜಾಗ



ರೂಕತೆಯಿಂದ ನೋಡಿಕೊಳ್ಳಬೇಕು" ಎಂದು ಎಚ್ಚರಿಕೆ ಕೊಟ್ಟು ತಂದೆಯ ಹೇಳಿಕೆಯಂತೆ ಶಿಬಿರಕ್ಕೆ ಹೊರಟುಹೋದನು.

ಮಗನು ಹೊರಟಕೂಡಲೇ ಶೂರವರ್ಮನು ಊರ್ಮಿಳೆಯ ಬಳಿಗೆ ಹೋಗಿ, ಅವಳೊಂದಿಗೆ ಮೃದುವಾಗಿ "ನೀನು ನನ್ನನ್ನು ಶತ್ರುವಂತೆ ಕಾಣದಿರು. ನಾನು ನಿಮ್ಮ ವಂಶಕ್ಕಾಗಲೀ, ರಾಜ್ಯಕ್ಕಾಗಲೀ ಅಪಕಾರ ಮಾಡಲೆಣಿಸಿಲ್ಲ. ಒಂದು ಷರತ್ತಿನಮೇಲೆ ನಾನು ನಿಮ್ಮ ತಂದೆಯೊಂದಿಗೆ ಸಂಧಿ ನಡಿಸಲು ಸಿದ್ಧನಾಗಿರುವೆನು. ಆ ಷರತ್ತೇನೆಂದರೆ ನೀನು ನನ್ನ ಪತ್ನಿಯಾಗಬೇಕು. ಈ ವಿಷಯ ನಿಮ್ಮ ತಂದೆಗೆ ತಿಳಿಸು" ಎಂದ. ಆತರುವಾಯ ಶೂರವರ್ಮನು ತನ್ನ ಭಟರೊಂದಿಗೆ ರಾಜಕುಮಾರಿಯನ್ನು ಬಂಧಿಯಂತೆ



ನೋಡಲಾಗದೆಂದೂ, ಆಕೆ ಸ್ವೇಚ್ಛೆಯಾಗಿ ತಿರುಗಾಡಲು ಅವಕಾಶ ಕೊಡಬೇಕೆಂದೂ ಅಪ್ಪಣೆ ಮಾಡಿದನು. ಆದರೆ ಅವನು ತನ್ನ ನೆಚ್ಚಿನ ಭಟರನ್ನು ರಹಸ್ಯವಾಗಿ ಬರಮಾಡಿಕೊಂಡು ಊರ್ಮಿಳೆಯೊಂದಿಗೆ ಸಂಪರ್ಕವಿಟ್ಟುಕೊಂಡಿರುವವರ ಬಗ್ಗೆ ತುಸ ಎಚ್ಚರಿಕೆ ವಹಿಸಿ, ತನಗೆ ಅವರ ಚಟುವಟಿಕೆಗಳನ್ನು ತಿಳಿಸುತ್ತಿರಬೇಕೆಂದು ಆಜ್ಞೆ ಮಾಡಿದ.

ಶೂರವರ್ಮನು ಕೋರಿದ ಪ್ರಕಾರ ತಂದೆಗೆ ಸುದ್ದಿ ಕಳುಹಿಸುವಂತೆ ಊರ್ಮಿಳೆ ಮಂತ್ರಿಗೆ ಹೇಳಿದಳು. ತನ್ನೊಂದಿಗೆ ಮಾತನಾಡಲು ಬರುವಂತೆ ಸುಬುದ್ಧಿಗೆ ಸುದ್ದಿ ಕಳುಹಿಸಿದಳು. ಸುಬುದ್ಧಿ ಊರ್ಮಿಳೆಯ ಕೋಣೆಗೆ ಹೋದುದನ್ನು ಕಂಡ ಭಟರು ಕೂಡಲೇ ಶೂರವರ್ಮನಿಗೆ ಸುದ್ದಿ ಮುಟ್ಟಿಸಿದರು. ಸುಬುದ್ಧಿಯನ್ನು ತಕ್ಷಣ ಬಂಧಿಸಿ ಸೆರೆಮನೆಗೆ ಕಳುಹಿಸಬೇಕೆಂದು ಶೂರವರ್ಮನು ಆಜ್ಞೆ ಮಾಡಿದನು.

ಭಟರು ಬಂಧಿಸಲು ಬರುವಷ್ಟರಲ್ಲಿ ಸುಬುದ್ಧಿ ಎಲ್ಲ ವಿಷಯಗಳನ್ನು ಊರ್ಮಿಳೆಯಿಂದ ಕೇಳಿ ತಿಳಿದುಕೊಂಡ. ಶೂರವರ್ಮನು ಊರ್ಮಿಳೆಯನ್ನು ಮದುವೆಯಾಗಲು ಹವಣಿಸುತ್ತಿದ್ದನು. ಆದರೆ ಊರ್ಮಿಳೆ ಚಂದ್ರವರ್ಮನನ್ನು ವಿವಾಹವಾಗಲು ಹಂಬಲಿಸುತ್ತಿದ್ದಳು. ಈ ವಿಷಯವನ್ನು ಚಂದ್ರವರ್ಮನಿಗೆ ತಿಳಿಸುವುದಾಗಿ ಊರ್ಮಿಳೆಗೆ ಸುಬುದ್ಧಿ ಮಾತು ಕೊಟ್ಟನು. ಆದರೆ ಅವನು ಅನಿರೀಕ್ಷಿತವಾಗಿ ಸೆರೆಯಾಳಾಗಿಬಿಟ್ಟನು. ಅವಳಿಗೆ ಕೊಟ್ಟ ಮಾತು ಅವನಿಂದ ನಡೆಸಲಾಗಲಿಲ್ಲ. ಮಂತ್ರಿ ಕಳುಹಿಸಿದ





ಸುದ್ದಿ ಅರಣ್ಯದಲ್ಲಿ ರಹಸ್ಯವಾಗಿ ಅಡಗಿದ್ದ ರಣಜಿತ ಮಹಾರಾಜನಿಗೆ ತಲುಪಿತು. ಆತನು ರಹಸ್ಯ ಮಾರ್ಗದಿಂದ ಅರಮನೆಗೆ ಬಂದನು. ತನ್ನ ಮಗಳನ್ನು ಶೂರವರ್ಮನಿಗೆ ಧಾರೆ ಎರೆಯಲು ಅವನು ಅಂಗೀಕರಿಸಿದನು. ಸಂಧಿಪತ್ರ ಸಿದ್ಧವಾಯಿತು. ಮತ್ತು ಅದೇ ದಿನ ಊರ್ಮಿಳೆಯನ್ನು ಶೂರವರ್ಮನಿಗಿತ್ತು ವಿವಾಹ ಮಾಡಲು ಒಂದು ಶುಭಮುಹೂರ್ತವಿಡಲಾಯಿತು.

ಅತ್ತ ಶಿಬಿರದಲ್ಲಿದ್ದ ಚಂದ್ರವರ್ಮನಿಗೆ ಸುಬುದ್ಧಿಯಿಂದ ಯಾವ ವರ್ತಮಾನವೂ ಬರಲಿಲ್ಲ. ಅವನು ಕಳವಳಗೊಂಡನು. ಅದೇ ಸಮಯಕ್ಕೆ ಆ ಶಿಬಿರದಲ್ಲಿ ಒಂದು ಪುಕಾರು ಹರಡಿತು. ರಣಜಿತಮಹಾರಾಜನು ಅರಮನೆಗೆ ಹಿಂತಿರುಗಿ ಬಂದನೆಂತಲೂ, ಶೀಘ್ರದಲ್ಲೇ ಸಂಧಿಯಾಗುವುದೆಂದೂ, ತಾವೆಲ್ಲರೂ ಪಾಟಲಿಪುತ್ರಕ್ಕೆ ಹಿಂತಿರುಗಬಹುದೆಂದೂ ಭಟರು ಮಾತಾಡಿಕೊಳ್ಳುತ್ತಿದ್ದರು.

ಒಂದು ರಾತ್ರಿ ಚಂದ್ರವರ್ಮನು ಸಾಮಾನ್ಯ ಉಡುಪುಗಳನ್ನು ತೊಟ್ಟು ಸೈನಿಕ ಶಿಬಿರದಿಂದ ಅರಮನೆಗೆ ಹೊರಟನು. ದಾರಿಯಲ್ಲಿ ಜನಗಳಾಡುತ್ತಿರುವ ಮಾತುಗಳ ಪ್ರಕಾರ ಮಾರನೇಯ ದಿವಸವೇ ತಂದೆ ಊರ್ಮಿಳೆಯನ್ನು ವಿವಾಹವಾಗುವುದಾಗಿಯೂ, ರಾಜದ್ರೋಹದ ಆಪಾದನೆಯಮೇಲೆ ಸುಬುದ್ಧಿಯನ್ನು ಖೈದು ಮಾಡಲಾಯಿತೆಂದೂ ತಿಳಿಯಿತು. ಅವನು ಕೋಟೆಯನ್ನು ಪ್ರವೇಶಿಸಿ ನೆಟ್ಟಗೆ ಸೆರೆಮನೆಗೆ ಹೋದನು. ಅಲ್ಲಿದ್ದ ಕಾವಲುಗಾರರೊಂದಿಗೆ ತಾನು ಶೂರವರ್ಮನ ಮಗನೆಂದೂ ತನ್ನನ್ನು



ಸುಬುದ್ಧಿಯ ಬಳಿಗೆ ಕರೆದುಕೊಂಡು ಹೋಗ ಬೇಕೆಂದೂ ಆಜ್ಞಾಪಿಸಿದನು.

"ಸ್ವಾಮಿ, ನಿಮ್ಮ ತಂದೆಯವರು ನಾಳೆ ಅವರನ್ನು ಸಿಂಹಗಳಿಗೆ ಬಲಿಕೊಡುವರು. ಅವ ರೊಂದಿಗೆ ಈಗ ಮಾತನಾಡುವುದು ಕ್ಷೇಮಕರ ವಲ್ಲ" ಎಂದರು ಕಾವಲುಗಾರರು.

ಚಂದ್ರವರ್ಮನಿಗೆ ಈ ಮಾತುಗಳು ಕೇಳಿ ಮೈ ಕಂಪಿಸಿತು.

"ಅದಕೆಂತಲೇ ಅವನಿಂದ ಒಂದು ರಹಸ್ಯ ವನ್ನು ತಿಳಿದುಕೊಳ್ಳಬೇಕು. ನನ್ನನ್ನು ಆತನ ಬಳಿಗೆ ಕರೆದುಕೊಂಡು ಹೋಗಿ" ಎಂದ ಚಂದ್ರ ವರ್ಮ ಅಧಿಕಾರ ಸ್ವರದಲ್ಲಿ.

ಒಬ್ಬ ಪಹರೆಯವನು ಚಂದ್ರವರ್ಮನನ್ನು ಸುಬುದ್ಧಿಯಿದ್ದ ಕೋಣೆಗೆ ಕರೆದುಕೊಂಡು



ಹೋದನು. ಸುಬುದ್ಧಿ ಎಚ್ಚರವಾಗಿಯೇ ಇದ್ದ. ಅವನು ಮೊಣಕಾಲುಗಳನ್ನು ಜೋಡಿಸಿ ಅದರ ಮೇಲೆ ತಲೆಯಿಟ್ಟು, ಗೋಡೆಯಕಡೆ ಮುಖ ಮಾಡಿಕೊಂಡು ಕುಳಿತಿದ್ದನು.

ಚಂದ್ರವರ್ಮನು ಕಾತರಸ್ವರದಲ್ಲಿ 'ಸುಬುದ್ಧಿ' ಎಂದು ಕರೆದನು.

ಸುಬುದ್ಧಿ ತಲೆ ಎತ್ತಿ ನೋಡದೆ "ಯಾರು ನೀನು? ನಿನ್ನೊಂದಿಗೆ ನನಗೇನೂ ಕೆಲಸವಿಲ್ಲ. ನಡಿಯಾಚೆ" ಎಂದು ಗದರಿಕೊಂಡನು.

ಚಂದ್ರವರ್ಮನು ಪಹರೆಯವನನ್ನು ಹೊರಗೆ ಹೋಗುವಂತೆ ಹೇಳಿ, ಕದವಿಕ್ಕಿ ಸುಬುದ್ಧಿಯ ಬಳಿಗೆ ಸಾರಿ "ಸುಬುದ್ಧಿ, ನಾನು ಚಂದ್ರವರ್ಮ" ಎಂದು ಮೆಲ್ಲ ನುಸಿರಿದ.

ಸುಬುದ್ಧಿ ತಟಕ್ಕನೆದ್ದು ನಿಂತು ತನ್ನ ಗೆಳೆಯ ನನ್ನು ಅಪ್ಪಿಕೊಂಡನು.

"ಈಗ ನಾವು ನಮ್ಮ ಉಡುಪುಗಳನ್ನು ಬದಲಾಯಿಸಬೇಕು. ನಿನ್ನ ಬದಲಾಗಿ ನಾನು ಸೆರೆಮನೆಯಲ್ಲಿರುತ್ತೇನೆ. ನನ್ನ ಉಡುಪನ್ನು ಧರಿಸಿಕೊಂಡು ನೀನು ಇಲ್ಲಿಂದ ತಪ್ಪಿಸಿಕೊ" ಎಂದ ಚಂದ್ರವರ್ಮ.

"ಅಸಂಭವ. ನಾಳೆ ನನ್ನನ್ನು ಸಿಂಹಗಳಿಗೆ ಹಾಕುತ್ತಾರೆ" ಎಂದ ಸುಬುದ್ಧಿ.

"ನಿನಗೆ ಈ ದುರ್ಗತಿ ಬರಲು ನಾನೇ ಕಾರಣ. ನನ್ನ ತಪ್ಪಿಗೆ ನೀನೇಕೆ ಸಾಯಬೇಕು? ಕೂಡಲೇ ನನ್ನ ಉಡುಪನ್ನು ಧರಿಸು" ಎಂದು ಚಂದ್ರವರ್ಮ ಒತ್ತಾಯಪಡಿಸಿದ. ಬೇಡಬೇಡ ವೆಂದು ಸುಬುದ್ಧಿ ಎಷ್ಟು ಹೇಳಿದರೂ ಒಪ್ಪಲಿಲ್ಲ.





ಕೊನೆಗೆ ಚಂದ್ರವರ್ಮನು ತನ್ನ ಅಧಿಕಾರವನ್ನು ಚಲಾಯಿಸಿ, ಸುಬುದ್ಧಿ ತನ್ನ ಉಡುಪನ್ನು ಧರಿಸುವಂತೆ ಮಾಡಿದ. ತಾನು ಸುಬುದ್ಧಿಯ ಉಡುಪನ್ನು ತೊಟ್ಟು, ಅವನು ಈಹಿಂದೆ ಕುಳಿತಿದ್ದಂತೆ ಗೋಡೆಗೆ ಒರಗಿಕೊಂಡು ಕುಳಿತನು. ನಂತರ ಸುಬುದಿ ಹೊರಗೆ ಹೊರಟನು. ಪಹರೆಯವನು ಬಂದು ಗೋಡೆಗೆ ಒರಗಿ ಕುಳಿತಿರುವ ವ್ಯಕ್ತಿ ಸುಬುದ್ಧಿ ಎಂತಲೇ ಭಾವಿಸಿ ಬಾಗಿಲಿಗೆ ಬೀಗ ಹಾಕಿದನು.

ಮಾರನೇಯ ದಿನ ಶೂರವರ್ಮನ ವಿವಾಹ. ವಿವಾಹಕ್ಕೆಮೊದಲು ಕೆಲವಾರು ವಿನೋದಗಳನ್ನು ಏರ್ಪಡಿಸಿದ್ದರು. ಖೈದಿಗೂ ಸಿಂಹಕ್ಕೂ ನಡುವೆ ಒಂದು ಕಾದಾಟವೇರ್ಪಡಿಸಿದ್ದರು. ಸಭಾಂಗಣದ ಮಧ್ಯೆ ಒಂದು ಎತ್ತರವಾದ ಅಖಾಡ ಸಿದ್ಧಪಡಿಸಿದ್ದರು. ಅದರಲ್ಲೊಂದು ಸಿಂಹವನ್ನು ತಂದುಬಿಟ್ಟರು. ಉನ್ನತಾಸನದ ಮೇಲೆ ಶೂರವರ್ಮ ಅವನ ಅಕ್ಕಪಕ್ಕಗಳಲ್ಲಿ ರಣಜಿತ ಮಹಾರಾಜ ಮತ್ತು ಅವನ ಮಗಳು ಊರ್ಮಿಳೆ ಮತ್ತು ಎರಡು ದೇಶಗಳ ಅಧಿಕಾರವರ್ಗ ಕುಳಿತಿದ್ದರು. ಅಖಾಡಾ ಸುತ್ತಲೂ ಸಾಮಾನ್ಯ ಜನರು ಕಿಕ್ಕಿರಿದು ನಿಂತಿದ್ದರು.

ನಂತರ ಚಂದ್ರವರ್ಮನನ್ನು ಸೆರೆಮನೆಯಿಂದ ಕರೆತಂದು ಅವನ ಕೈಗೆ ಖಡ್ಗ ಮತ್ತು ಗುರಾಣಿಗಳನ್ನು ಕೊಟ್ಟು, ಅಖಾಡಾದೊಳಕ್ಕೆ ತಳ್ಳಿದರು. ಅವನ ತಲೆಗೂದಲು ಕೆದರಿತ್ತು. ಬಂದಿಗಳ ಉಡುಪಿನಲ್ಲಿದ್ದುದರಿಂದ ಯಾರೂ ಅವನನ್ನು ಗುರ್ತಿಸದಾದರು. ಶೂರವರ್ಮನು ಅವನು ಸುಬುದ್ಧಿ ಎಂತಲೇ ಭಾವಿಸಿದ್ದ. ಸಿಂಹ ಮೊದಲು ಚಂದ್ರವರ್ಮನನ್ನು ನೋಡಿಯೂಸಹ ಗಮನ ಕೊಡದೆ ಮುಖವನ್ನು ಪಕ್ಕಕ್ಕೆ ತಿರುಗಿಸಿಕೊಂಡಿತು. ಅದನ್ನು ರೊಚ್ಚಿಗೆಬ್ಬಿಸಲು ಶೂರವರ್ಮನು ಅದರ ಸಮಿಪದಲ್ಲಿ ಗಟ್ಟಿಯಾಗಿ ಕಹಳೆ ಊದಿಸಿದನು. ಆ ಶಬ್ದಕ್ಕೆ ಕೆರಳಿದ ಸಿಂಹ ಜೂಲುಜಾಡಿಸಿ ಚಂದ್ರವರ್ಮನ ಮೇಲೆ ಹಾರಿತು. ಅವನು ಗುರಾಣಿಯನ್ನು ಅಡ್ಡ ಹಿಡಿದು ಪಕ್ಕಕ್ಕೆ ನೆಗೆದು ಖಡ್ಗವನ್ನು ಬೀಸಿದನು. ಆದರೆ ಅವನ ಖಡ್ಗಕ್ಕೆ ಸಿಂಹ ಸಿಕ್ಕಲಿಲ್ಲ. ಸಿಂಹ ಮಿತಿಮಿರಿ ಉದ್ರೇಕಗೊಂಡಿತು. ಅದು ಭಯಂಕರವಾಗಿ ಆರ್ಭಟಿಸುತ್ತಾ ಮತ್ತೊಮ್ಮೆ ಅವನ ಮೇಲೆ ಹಾರಿತು. ಈಸಾರಿ ಖಡ್ಗ ಬೀಸಲು ಅದು ಸಿಂಹದ ಕಾಲಿಗೆ ತಾಕಿತು. ರಕ್ತಚಿಮ್ಮಿತು.



ಶೂರವರ್ಮನಿಗೆ ಹೊರತು ಬೇರೆ ಯಾರಿಗೂ ಈ ಹೋರಾಟ ಉತ್ಸಾಹವನ್ನುಂಟು ಮಾಡಲಿಲ್ಲ. ಶೂರವರ್ಮನು ಸೈದಿ ಬಹಳ ಯುಕ್ತಿಯಿಂದ ಸಿಂಹದೊಂದಿಗೆ ಹೋರಾಡು ತ್ತಿರುವುದನ್ನು ನೋಡುತ್ತಿದ್ದ. ಆದರೆ ಅವನ ಅಂತರಾಳದಲ್ಲಿ ಸಿಂಹ ಆದಷ್ಟು ಬೇಗ ಸೈದಿ ಯನ್ನು ಕೊಲ್ಲಲೆಂದು ಆಶಿಸುತ್ತಿದ್ದ.

ಹೀಗಿರಲು ಅಲ್ಲಿಗೆ ಸುಬುದ್ಧಿ ಉಸಿರೆಳೆದು ಕೊಂಡು ಬಂದು "ಮಹಾಪ್ರಭು, ಚಂದ್ರವರ್ಮ ನನ್ನು ಕಾಪಾಡಿ. ಆ ಸಿಂಹ ಆತನನ್ನು ಕೊಲ್ಲು ವುದು ಖಂಡಿತ" ಎಂದು ಅರಚಿದ.

ಶೂರವರ್ಮ ಸುಬುದ್ಧಿಯಕಡೆ ನೋಡಿ ಅವನ ಗುರುತು ಹಿಡಿದ. ಹಾಗೆಂದರೆ ಸಿಂಹ ದೊಂದಿಗೆ ಹೋರಾಡುತ್ತಿರುವುದು ಸುಬುದ್ಧಿ ಯಲ್ಲ! ಶೂರವರ್ಮನಿಗೆ ದಿಕ್ಕೇ ತೋರಲಿಲ್ಲ. "ಅಯ್ಯೋ! ನನ್ನ ಮಗನನ್ನು ಸಿಂಹ ಕೊಂದು ಬಿಡುತ್ತದೆ. ಕಾಪಾಡಿ, ಕಾಪಾಡಿ" ಎಂದು ಶೂರವರ್ಮನು ಕಿರಿಚಿಕೊಂಡ.

ಸಿಂಹದೊಂದಿಗೆ ಕಾದಾಡುತ್ತಿರುವ ವ್ಯಕ್ತಿ ಚಂದ್ರವರ್ಮನೆಂದು ತಿಳಿದಾಕ್ಷಣ ಊರ್ಮಿಳೆ ಮೂರ್ಛಿತಳಾಗಿ ಬಿದ್ದುಬಿಟ್ಟಳು. ಜನರಲ್ಲಿ ಹಾಹಾಕಾರವೆದ್ದಿತು. ಸಿಂಹ ಈ ಗಲಭೆಗೆ ಹೆದರಿ ಬಿಟ್ಟಿತು. ಅಷ್ಟರವರೆವಿಗೂ ಸಮಯ ಕಾಯು ತ್ತಿದ್ದ ಚಂದ್ರವರ್ಮನು ಕತ್ತಿಯನ್ನು ಅದರ ಎದೆಗೆ ತಿವಿದನು. ಕೂಡಲೇ ಅದು ಭೀಕರವಾಗಿ ಆರ್ಭಟಿಸುತ್ತಾ ಪ್ರಾಣ ತೊರೆಯಿತು.

ಶೂರವರ್ಮನಲ್ಲಿ ಭಾರಿ ಬದಲಾವಣೆ ಯಾಯಿತು. ಅವನು ತನ್ನ ಮಗನನ್ನು ಆಲಿಂ ಗಿಸಿಕೊಂಡು, ಹೆಂಗಸರಂತೆ ಅತ್ತನು. ಅನೇಕ ರನ್ನು ಸಿಂಹಗಳು ಈ ರೀತಿ ಕೊಂದುದನ್ನು ನೋಡಿ ಆನಂದಿಸಿದ ಶೂರವರ್ಮನು, ಸ್ವಂತ ಮಗನನ್ನು ಸಿಂಹ ಕೊಲ್ಲಲಿರುವುದನ್ನು ನೋಡ ಬೇಕಾಯಿತಲ್ಲಾ ಎಂದು ಬಹಳ ಪರಿತಪಿಸಿದನು. ತನ್ನ ಜನ್ಮದಲ್ಲಿ ಅವನು ಮತ್ತೆ ಎಂದೂ ಯುದ್ಧ ಮಾಡಲಿಲ್ಲ. ಮನುಷ್ಯರನ್ನು ಕ್ರೂರ ಮೃಗಗಳ ಬಾಯಿಗೆ ಹಾಕಲಿಲ್ಲ.

ಚಂದ್ರವರ್ಮ ಊರ್ಮಿಳೆಯರ ವಿವಾಹ ವಿಜೃಂಭಣೆಯಿಂದ ನಡೆಯಿತು. ಚಂದ್ರವರ್ಮನು ಪಾಟಲಿಪುತ್ರ ಮತ್ತು ಜಯಂತ ದೇಶಗಳ ರಾಜ ನಾಗಿ ಅನೇಕ ವರ್ಷಗಳಕಾಲ ರಾಜ್ಯವಾಳಿದನು.





# ಮಿತ್ರಭೇದ

ಬಡಗಿಯೋರ್ವ ಜಾಡನೋರ್ವ
ಬಹಳಕಾಲದಿಂದಲೂ
ಬಾಳ ಗೆಳೆಯರಂತೆ ಕೂಡಿ
ಜೋಡಿಯಾಗಿ ಬಾಳ್ದರು.
ಒಮ್ಮೆ ಊರ ದೇವಳದಲಿ
ಬಂತು ದೊಡ್ಡ ಉತ್ಸವ;
ಊರೂರಿನ ಜನರು ಎಲ್ಲ
ಬಂದು ಸೇರ್ದರಲ್ಲಿಗೆ.
ನಟರು ನಾಟ್ಯಕಾರರು ಸಂ
ಗೀತಕಲಾ ನಿಪುಣರ
ಲಲಿತಲೀಲೆ ನೋಡಲೆಂದು
ಬಹಳ ಜನರ ಸಂದಣಿ.
ಹೆಣ್ಣಾನೆಯ ಮೇಲೆ ಕುಳಿತು
ರಾಜಕುವರಿ ಬಂದಳು.
ಕಂಗೆ ಹಬ್ಬವಾಗಿ ಕಾಂಬ
ಪರಮ ಸುಂದರೀಮಣಿ!
ಅವಳ ರೂಪ ಕಂಡು ಜಾಡ
ಮೋಹಕವಿದು ಬಿದ್ದನು!

ಅವನ ಎತ್ತಿ ಮನೆಗೆ ಹೊತ್ತು
ಉಪಚರಿಸುತೆ ಗೆಳೆಯನು
"ಎನಾಯ್ತೈ" ಎಂದು ಕೇಳೆ,
"ಅಕಟ! ಏನ ಪೇಳಲಾಂ?
ಎನ್ನ ಮನವ ಸೂರೆಗೊಂಡ
ರಾಜಕುವರಿ ಯಿಲ್ಲದೇ
ಏಕೆ ಬದುಕಲಕಟ! ಎನ್ನ
ಹಣೆಯುಬರೆಹ ಸಾಯ್ವುದೇ!"
ಇಂತಳುವಾ ಜಾಡಗೆ ಮಾ
ರೆಂದ ಬಡಗಿ ಮಿತ್ರನು:
"ಇನಿತುತಾನೆ? ಚಿಂತ ಬೇಡ!
ಮಾಳ್ಪೆ ನೋಡುಪಾಯವ!"
ಎಂದು ಬಡಗಿ ಯಂತ್ರದೊಂದು
ಗರುಡಪಕ್ಷಿ ಮಾಡಿದ.
ಶಂಖ ಚಕ್ರ ಗದೆ ಕಿರೀಟ
ಗಳ ಚೆಲುವಿಗೆ ಗೈದನು!
ಜಾಡನನ್ನು ವಿಷ್ಣುವಂತೆ
ಮಾರುಪಡಿಸಿಬಿಟ್ಟನು!

ಟಿ. ಎ. ಶರ್ಮ



ಗರುಡದ ಕೀಲಕಗಳೆಲ್ಲ
ತೋರುಪಡಿಸಿಕೊಟ್ಟನು.
ವಿಷ್ಣುವಾಗಿ, ಕೀಲು ಹಕ್ಕಿ
ಯೇರಿ ಹಾರಿ ಜಾಡ ತಾ,
ಇರುಳಿನಲ್ಲಿ ರಾಜಕನ್ಯೆ
ಅರಮಾಳಿಗೆ ಸೇರ್ದನು.
ಬೆರಗುಗಣ್ಣ ಚೆಲುವೆಯ ಮುಂ
ದಿಳಿದು ನಿಂದು—" ಓ ಪ್ರಿಯೆ!
ಕಾಂತೆ! ನಿನ್ನ ಕಂಡು ಎನ್ನ
ಲಕ್ಷ್ಮಿಯನೇ ಬಿಟ್ಟೆನಾಂ!
ಒಲಿದೆ ನಿನಗೆ! ವರಿಸುಯೆನ್ನ!
ಲಜ್ಜೆ ಬೇಡ!" ಎಂದನು.

"ದೇವ! ಅಲ್ಪಳಾದ ನಾನು
ನಿರ್ಮೊಲವಿಗೆ ಪಾತ್ರಳೆ?
ಎನ್ನ ತಂದೆ ತಾಯ ಕಂಡು
ಕೇಳಿರೆನ್ನ " ಎಂದಳು.
"ಇತರರಾರ ಕಣ್ಣಿಗಾನು
ಬೀಳಲಾರೆ ಚೆಲುವೆಯೇ.
ಗಾಂಧರ್ವದ ವಿಧಿಯಲೆನ್ನ
ವರಿಸಿಕೊಳೇ ತರಳೆಯೆ!
ಒಲ್ಲದಿದ್ದ ರೀಗ ನಿನ್ನ
ತಂದೆ ತಾಯಿ ಎಲ್ಲರಂ
ಬೂದಿ ಮಾಡಿ ಊದಿಬಿಡುವೆ!"
ಎಂದ ನುಡಿಗೆ ಹೆದರಿದಳ್.
ಒಪ್ಪಿದವಳ ನಪ್ಪಿ ಸೊಗಸಿ
ಪೋದ ನಾತ ನಿತ್ಯವೂ.
ತಪ್ಪದಂತೆ ರಾತ್ರಿಯಲ್ಲಿ
ವಿಷ್ಣುವಾಗಿ ಬರುತಲಿ,
ಬೆಳಗು ಮುನ್ನ ಹೊರಟು ಹೋಗು
ತಿರ್ದ ನುರುಳೆ ದಿನಗಳು,
ಕಾಲಕ್ರಮಿಸೆ, ಸಖಿಯರೆಲ್ಲ
ಅರಸುಮಗಳ ಮೈಯಲಿ
ಚಿಗುರುತಿರುವ ವ್ಯತ್ಯಾಸವ
ಕಂಡು ಗುಸಗುಸಾಡುತ,
ಗುಂಪುಗೂಡಿ ರಾಣಿಯಲ್ಲಿ
ಅರಿಕೆ ಮಾಡಿಕೊಂಡರು.

ರಾಣಿ ಕುವರಿಯನ್ನು ಕಂಡು
ಕೋಪದಿಂದ ಕೇಳಿದಳ್.
"ಎನ್ನ ತಪ್ಪು ಇಲ್ಲವಮ್ಮ;
ಸಾಕ್ಷಾತ್ ನಾರಾಯಣ
ರಾತ್ರಿಯಲ್ಲಿ ಬಂದು ಎನ್ನ
ಗಾಂಧರ್ವದಿ ವರಿಸಿದ.
ನಿತ್ಯ ರಾತ್ರಿ ಬರವನಮ್ಮ"
ಎಂದ ಮಗಳ ಮಾತಿಗೆ
ಬೆರಗುವಡೆದು ರಾಜ ರಾಣಿ
ಇರುಳು ಹೊಂಚಿಕಾದರು.
ಗರುಡನೇರಿ ಬಂದಿಳಿದಾ
ಸಾಕ್ಷಾನ್ಮುರ ಹರನನೇ
ಶಂಖ ಚಕ್ರಧಾರಿಯಾದ
ದೇವನವನ ಕಾಣುತ,
ಎಮ್ಮ ತಪದ ಫಲವಿದೆಂದು
ಉಬ್ಬಿ ಪುಲಕಿತಾಂಗದಿ
ಮರೆಯಲಿದ್ದೆ ಮಣಿದರವಗೆ
ರಾಜ ರಾಣಿ ಈರ್ವರು!
ಇರಲು ಹೀಗೆ, ದಿವಸ ಸಾಗೆ,
ಮೇರೆರಾಜ್ಯ ದರಸರು
ಒಂದು ಸೇರಿ ದೇಶದಮೇಲ್
ದಂಡನೆತ್ತಿ ಬಂದರು!
ರಾಜ ನೀ ವಿಪತ್ತು ಕಂಡು
ಮಗಳನಿಂತು ಬೇಡಿದ:



"ಅಳಿಯನಲ್ಲಿ ಯೆನ್ನ ದೊಂದು
ಬಿನ್ನಪವನು ಕೇಳಿಸೇ!
ಅಲ್ಪ ರಾಜರಿಂದ ಬರುವ
ಅವಮತಿಯ ನಿವಾರಿಸೇ!"
ಸರಿಯೆಂದವ ಳಂದು ರಾತ್ರಿ
ಸನಿಯ ಸೇರ್ದ ಜಾಡಗೆ,
"ಸ್ವಾಮಿ, ನೀವೆ ಅಳಿಯನಾಗೆ
ತಂದೆಗೇಕೆ ರಿಪು ಭಯ?
ಶತ್ರು ಭೀತಿಯಿಂದ ಯೆಮ್ಮ
ರಕ್ಷಿಸಬೇಕೆ"ಂದಳು.
ಕೇಳಿ ಜಾಡ ದೇವನಂತೆ
ತಲೆಯೋಲಾಡಿಸಿದನು.

# ಅಶರೀರವಾಣಿಯ ಎಚ್ಚರಿಕೆ!



ತ್ರಿವಿಕ್ರಮನು ಮರದ ಬಳಿಗೆ ಮತ್ತೆ ಹೋಗಿ ಶವವನ್ನು ಕೆಳಕ್ಕಿಳಿಸಿ ಭುಜದಮೇಲೆ ಹಾಕಿಕೊಂಡು ಇನ್ನೊಮ್ಮೆ ಶ್ಮಶಾನದಕಡೆ ನಡೆದನು. ಆಗ ಶವದಲ್ಲಿದ್ದ ಬೇತಾಳ ಗಹಗಹಿಸಿ ನಕ್ಕು "ರಾಜ, ನೀನಿಷ್ಟು ತಾಪತ್ರಯಪಡುತ್ತಿದ್ದರೂ ಮುಂದೆ ನಡೆಯುವುದನ್ನು ಬದಲಾಯಿಸುವಶಕ್ತಿ ನಿನಗೆ ಸ್ವಲ್ಪವಾದರೂ ಇಲ್ಲ. ಈ ವಿಷಯ ತಿಳಿಯಲಾರದೆ ಹಿಂದೆ ಕುನಾಲನೆಂಬ ಯುವಕನು ಪ್ರಾಣವನ್ನು ಕಳೆದುಕೊಂಡನು. ಅವನ ಕಥೆಯನ್ನು ಹೇಳುವೆನು ಕೇಳು" ಎಂದು ಈ ರೀತಿ ಹೇಳಲಾರಂಭಿಸಿತು.

ಪೂರ್ವಕಾಲದಲ್ಲಿ ಒಂದು ಗ್ರಾಮದಲ್ಲಿ ಕುನಾಲನೆಂಬ ಯುವಕನಿದ್ದನು. ಅವನು ತುಂಬಾ ಕರುಣಾಳು. ಸದಾ ಸಂತೋಷಚಿತ್ತನಾಗಿರುತ್ತಿದ್ದನು. ಅವನು ನಗರಕ್ಕೆ ಹೋಗಿ ಯಾವುದಾದರೂ ನೌಕರಿಯಲ್ಲಿ ಸೇರಬೇಕೆಂಬ ಉದ್ದೇಶದಿಂದ ಒಂದು ದಿನ ತನ್ನ ಗ್ರಾಮದಿಂದ ಪ್ರಯಾಣ ಹೊರಟನು.

---

ಬೇತಾಳ ಕಥೆಗಳು

---





ಕುನಾಲನು ತನ್ನ ಗ್ರಾಮದಿಂದ ಪಶ್ಚಿಮಕ್ಕೆ ಸ್ವಲ್ಪದೂರ ಹೋಗಲು ಅವನಿಗೆ ಒಂದು ಅಡವಿ ಕಾಣಿಸಿತು. ಆ ಅಡವಿಯನ್ನು ದಾಟಿದರೆ ಹಚ್ಚನೆಯ ಬೈಲು ಬರುತ್ತಿದೆ. ಅದನ್ನು ದಾಟಿದ ನಂತರ ಒಂದು ಬೆಟ್ಟ ಕಾಣಿಸುವುದು. ಆ ಬೆಟ್ಟದ ಪಶ್ಚಿಮಭಾಗದಲ್ಲಿ ರಾಜಧಾನಿಯಿದೆ.

ಕುನಾಲನು ಅಡವಿಯನ್ನು ಸೇರುವವೇಳೆಗೆ ಮಟಮಟ ಮಧ್ಯಾಹ್ನವಾಗಿತ್ತು. ಬಿಸಿಲು ಕೆಂಡದಂತೆ ಕಾಯುತ್ತಿತ್ತು. ಅಡವಿಯಲ್ಲಿ ಮರಗಳ ನೆರಳಿರುವುದು. ಬಿಸಿಲು ಕಡಿಮೆಯಾಗುವ ವರೆವಿಗೆ ಆಡುತ್ತಾ, ಹಾಡುತ್ತಾ ನಡೆಯಲು ಅನುಕೂಲವಾಗುವುದು ಎಂಬ ಉದ್ದೇಶದಿಂದ ಕುನಾಲನು ಅಡವಿಯನ್ನು ಪ್ರವೇಶಿಸಿದನು.

ಸರಿಯಾಗಿ ಆ ಸಮಯಕ್ಕೆ ಒಂದು ಗಂಭೀರ ಕಂಠ " ಕುನಾಲ, ಅಡವಿಯೊಳಗೆ ಕಾಲಿಡಬೇಡ. ಅನ್ಯಾಯವಾಗಿ ಒಂದು ಹತ್ಯೆ ಮಾಡಿದವನಾಗುವೆ" ಎಂದು ಎಚ್ಚರಿಸಿತು. ಆ ಧ್ವನಿ ಎತ್ತಲಿಂದ ಬಂದಿತು, ಎಷ್ಟು ದೂರದಿಂದ ಬಂದಿತು ಎಂಬುದನ್ನು ಅವನು ಊಹಿಸಲಾರದಾದನು. ತನ್ನನ್ನು ಯಾರೋ ಎಗತಾಳಿ ಮಾಡುತ್ತಿರುವರೆಂದು ಭಾವಿಸಿ ಮರಗಳ ಹಿಂದೆಲ್ಲಾ ನೋಡಿದನು. ಎಲ್ಲಿಯೂ ಏನೂ ಕಾಣಿಸಲಿಲ್ಲ.

ಮುಂದೆ ನಡೆಯುವ ಉತ್ಸಾಹದಲ್ಲಿ ಕುನಾಲನು ಈ ಎಚ್ಚರಿಕೆಯನ್ನು ಪರಿಗಣಿಸಲಿಲ್ಲ.

ಅವನು ಅಡವಿಯನ್ನು ಪ್ರವೇಶಿಸಿ ಮರಗಳ ನೆರಳಲ್ಲಿ ನಡೆಯಲಾರಂಭಿಸಿದ. ಆತನು ಬಹು ಕೋಮಲ ಹೃದಯನಾದುದರಿಂದ ಎಲ್ಲಿ ವಿನಾಕಾರಣ ಹತ್ಯೆ ಮಾಡಬೇಕಾಗಿ ಬರುವುದೋ ಎಂದು ಬಹಳ ಚಿಂತಿಸುತ್ತಿದ್ದ.

ಆದರೆ ಅಡವಿಯಲ್ಲಿ ಅವನು ಯಾರ ಮೇಲೆಯೂ ಕೈಮಾಡುವ ಪ್ರಸಂಗ ಬರಲಿಲ್ಲ. ಯಾವ ಗಂಡಾಂತರವೂ ಉಂಟಾಗಲಿಲ್ಲ. ಯಾವ ಅಚಾತುರ್ಯವೂ ನಡೆಯದೆ ಅವನು ಅಡವಿಯ ಹೊರಭಾಗವನ್ನು ತಲುಪಿದನು. ಇನ್ನೂ ಬಿಸಿಲಿನ ತಾಪ ವಿಪರೀತವಾಗಿತ್ತು. ನಿಷ್ಕಾರಣವಾಗಿ ಭಯಪಟ್ಟೆನೆಂದು ತನಗೆ ತಾನೇ ನಕ್ಕನು.

ಕುನಾಲನು ಅಡವಿಯ ಅಂಚಿನಲ್ಲಿದ್ದ ಮರಗಳ ನೆರಳಲ್ಲಿ ಕೊಂಚಹೊತ್ತು ವಿಶ್ರಾಂತಿಪಡೆದನು. ಒಂದು ಸಣ್ಣ ನಿದ್ದೆಯೂ ಬಂತು. ಬಿಸಿಲು ಮೇಲೆ ಬಿದ್ದಕೂಡಲೇ ಎಚ್ಚೆತ್ತನು. ಬೈಲನ್ನು ದಾಟಿ, ಬೆಟ್ಟವನ್ನು ಹತ್ತಿ ಇಳಿಯಬೇಕಾ





ಆಚಾತುರ್ಯ ಯಾರಿಂದಲಾದರೂ ನಡೆಯುತ್ತದೆ. ಈ ಬೈಲನ್ನು ಪ್ರವೇಶಿಸುವುದರಿಂದ ದೇಶಕ್ಕೆ ಅನಿಷ್ಠ ತರುವೆನೆಂದು ಹೇಳುವುದು ಸುಳ್ಳು" ಎಂದು ಹೇಳಿ ಮುಂದೆ ನಡೆದ.

ಅವನು ಬೆಟ್ಟವನ್ನು ಸೇರುವವೇಳೆಗೆ ಸಂಜೆಯಾಗಿತ್ತು. ಆದರೆ ಬೆಟ್ಟದ ಆಚೆ ಸಂಜೆಯಾಗಲು ಇನ್ನೂ ಸಮಯವಿತ್ತು. ಈ ವಿಷಯ ಕುನಾಲನಿಗೆ ತಿಳಿದಿತ್ತು. ಅದರಿಂದ ಅವನು ಬೆಟ್ಟವನ್ನು ಹತ್ತಲಾರಂಭಿಸಿದನು. ಮತ್ತೆ ಅದೇ ಅಶರೀರ ಧ್ವನಿ ಗಂಭೀರವಾಗಿ ನುಡಿಯಿತು.

"ಕುನಾಲ, ಬೆಟ್ಟವನ್ನು ಹತ್ತಬೇಡ! ಸಾಯುವೆ" ಕುನಾಲನ ಮೈ ಉರಿಯಿತು. "ನನ್ನನ್ನೇಕೆ ಹಾಗೆ ಹೆದರಿಸುವೆ. ನಾನು ನಿನಗೆ ಅಪಹಾಸ್ಯಮಾಡುವ ವಸ್ತುವಾಗಿ ಬಿಟ್ಟೆನೇ? ಬೈಲನ್ನು ದಾಟಿದೆ. ದೇಶಕ್ಕೆ ಅನಿಷ್ಠ ತರುವೆನಂದೆ, ತಂದೆನೇ?" ಎಂದು ಏರಿದಸ್ವರದಲ್ಲಿ ಕೂಗಾಡಿದ.

"ಹೌದು. ತಂದಿರುವೆ ನೀನು ಬೈಲನ್ನು ದಾಟುವ ಸಮಯದಲ್ಲಿ ಕೆಲವಾರು ಪತಂಗಗಳು ಹೆದರಿ ಹಾರಿಹೋದುವು. ಅವುಗಳಲ್ಲಿ ಒಂದು ತುಂಬಾ ಹೆದರಿಬಿಟ್ಟಿತು. ಅದು ರಾಜಧಾನಿಗೆ ಹೋಗಿ ಒಂದು ಮರದಮೇಲೆ ಮೊಟ್ಟೆ ಯಿಡುವುದು. ಅದು ಮರಿಯಾದರೆ ಕ್ರಿಮಿಯಾಗಿ ಗರ್ಭಿಣಿಯಾಗಿರುವ ರಾಣಿಯ ಕತ್ತಿನಮೇಲೆ ಹರಿದಾಡುವುದು. ಕೂಡಲೇ ರಾಣಿ ಕಿವ್ವನೆ ಕಿರಿಚಿ ಕೆಳಗೆ ಬೀಳುವಳು. ಆಗ ಆಕೆಗೆ ಗರ್ಭಸ್ರಾವವಾಗುವುದು. ರಾಜನಿಗೆ ಮತ್ತೆ ಸಂತಾನ ಪ್ರಾಪ್ತಿಯಿಲ್ಲ. ಅದರಿಂದ ರಾಜನ ತಮ್ಮ ಅರಸನಾಗು

ಗಿತ್ತು. ಎಂತಲೇ ಅವನು ಬೇಗಬೇಗ ನಡೆಯಲಾರಂಭಿಸಿದನು.

ಈ ಸಾರಿಯೂ ಒಂದು ಧ್ವನಿ ಕೇಳಿಸಿತು.

"ಕುನಾಲಾ. ಮೈದಾನಕ್ಕೆ ಹೋಗಬೇಡ. ದೇಶಕ್ಕೆ ಅನಿಷ್ಠ ತಂದೀಯಾ"

"ಯಾರು ನೀನು? ನನ್ನನ್ನೇಕೆ ಬೆದರಿಸುವೆ? ನಿನ್ನ ಮಾತು ನಂಬಲಾರೆ. ಅಡವಿಯಲ್ಲಿ ಪ್ರವೇಶಿಸಿದರೆ ನಾನು ಯಾರನ್ನೋ ಹತ್ಯೆ ಮಾಡುವೆನೆಂದು ಹೇಳಿದೆ. ನಾನು ಯಾರನ್ನೂ ಕೊಲ್ಲಲಿಲ್ಲ." ಎಂದ ಕುನಾಲ.

"ಕೊಲೆಮಾಡಿರುವೆ. ನಿನ್ನ ಪಾದದ ಕೆಳಗೆ ಸಿಕ್ಕಿ ಒಂದು ಹುಳ ಸತ್ತು ಹೋಯಿತು." ಎಂದಿತು ಆ ಕಂಠಧ್ವನಿ. "ಅದಕ್ಕೆ ನಾನೇನು ಮಾಡಲಿ? ತಿಳಿದು ಮಾಡಿದೆನೆ? ಅಂತಹ





ತ್ತಾನೆ. ಅವನು ಪರಮಚಂಡಾಲ, ಅಯೋಗ್ಯ. ರಾಜ್ಯವನ್ನು ಅರಾಜಕಮಾಡಿ, ಕಡೆಗೆ ಅದನ್ನು ಶತ್ರುಗಳಪಾಲು ಮಾಡುವನು. ಈ ಅನರ್ಥಗಳಿಗೆಲ್ಲಾ ನೀನೇ ಕಾರಣ" ಎಂದು ವಿವರಿಸಿ ಹೇಳಿತು ಆ ಅದೃಶ್ಯ ಕಂಠಸ್ವರ.

"ಪ್ರತಿ ಸಂಘಟನೆಗೂ ಯಾವುದೋ ಒಂದು ಫಲಿತವಿದ್ದೇ ಇರುತ್ತದೆ. ಎಂದೋ, ಯಾವಾಗಲೋ ನಡೆಯುವುದಕ್ಕೆ ನಾನು ಹೊಣೆಗಾರನೆಂದರೆ ಒಪ್ಪುವ ಮಾತಲ್ಲ." ಎಂದು ಕುನಾಲನು ಬೆಟ್ಟವನ್ನು ಏರಲಾರಂಭಿಸಿದನು. ಅವನು ಬೆಟ್ಟದ ತುದಿಯನ್ನು ಸೇರುವವೇಳೆಗೆ ಇನ್ನೂ ಸ್ವಲ್ಪ ಬೆಳಕಿತ್ತು. ಬೆಟ್ಟದ ಇತ್ತಕಡೆ ಆಗಲೇ ಕತ್ತಲಾಗಿಬಿಟ್ಟಿತ್ತು.

ಕುನಾಲ ವಿಜಯಗರ್ವದಿಂದ "ಈಗೇನು ಹೇಳುವೆ? ಬೆಟ್ಟವನ್ನು ಹತ್ತಿದೆ. ಆದರೂ ಇನ್ನೂ ಜೀವದಿಂದಿರುವೆನು. ನಿನ್ನ ಮಾತುಗಳೆಲ್ಲಾ ಶುದ್ಧ ಸುಳ್ಳು" ಎಂದು ನಗಾಡಿದ.

"ಹುಚ್ಚ, ನಿನ್ನೊಂದಿಗೆ ಸುಳ್ಳಾಡುವ ಅಗತ್ಯ ನನಗೇನೂ ಇಲ್ಲ. ಬೆಟ್ಟವೇರಿದವನು ಇಳಿಯಲೇ ಬೇಕಷ್ಟೆ. ಪ್ರಾಣವಿರುವಾಗ ನೀನು ಇನ್ನು ಯಾರನ್ನೂ ನೋಡಲಾರೆ. ನೀನು ಜೀವಂತನಾಗಿರುವುದನ್ನು ಇನ್ನು ಯಾರೂ ನೋಡಲಾರರು! ತಿಳಿಯಿತೇ?' ಎಂದಿತು ಕಂಠಧ್ವನಿ.

ಕುನಾಲನು ಈ ಸಾರಿ ಬೆದರಿದನು. ಮುತ್ತಿಬರುತ್ತಿದ್ದ ಕತ್ತಲೆಯಲ್ಲಿ ಬೆಟ್ಟದಿಂದ ಇಳಿಯುವುದು ಪ್ರಮಾದಕರ. ಮುಂಜಾನೆಯ ತನಕ ಬೆಟ್ಟದಮೇಲೆಯೇ ಇರಲು ನಿಶ್ಚಯಿಸಿಕೊಂಡ. ಆದರೆ ತುಸ ಆಲೋಚಿಸಿದ ನಂತರ ಭಯಪಡುವುದು ತೀರಾ ಅನವಶ್ಯಕವೆನಿಸಿತು. ಏಕೆಂದರೆ ಅವನೊಂದಿಗೆ ಮಾತನಾಡಿದ ಕಂಠಸ್ವರ, ಅಶರೀರವಾಣಿಯದಾಗಿದ್ದರೆ ಅದು ಮುಂದಾಗುವುದನ್ನು ತಿಳಿದುಕೊಳುತ್ತಿರುವುದು. ಹಾಗೆಂದರೆ ತನಗೆ ಸಾವು ಖಂಡಿತ. ಹಾಗಿರಲು ಸಾವಿಗಾಗಿ ಏಕೆ ಬೆಳಗಾಗುವ ತನಕ ತಾನು ಕಾದಿರಬೇಕು? ಅಶರೀರವಾಣಿಗೆ ಭವಿಷ್ಯ ತಿಳಿಯದೆ ಮಾತನಾಡುತ್ತಿದ್ದರೆ ಅದುಕೊಟ್ಟ ಎಚ್ಚರಿಕೆಗೆ ಗಮನವೀಯಬೇಕಾದ ಅಗತ್ಯವಿಲ್ಲ. ಹೀಗೆಂದು ಕುನಾಲನು ಕತ್ತಲಲ್ಲಿ ಬೆಟ್ಟವನ್ನು ಇಳಿಯಲಾರಂಭಿಸಿದನು. ಹಾಗೆ ಇಳಿಯುತ್ತಿರಲು ಒಂದು ಕಡೆ ಕಾಲುಜಾರಿ ಕೆಳಗೆ ಬಿದ್ದು ಮರಣಿಸಿದನು.



ತರುವಾಯ ಕೊಂಚ ದಿನಗಳಾದಮೇಲೆ ಅಶರೀರವಾಣಿ ಹೇಳಿದಂತೆ ರಾಣಿಯ ಕತ್ತಿನ ಮೇಲೆ ಒಂದು ಹುಳು ಹರಿದಾಡಿತು. ಆಕೆ ಮೂರ್ಛೆಹೋಗಿ ಕೆಳಗೆ ಬಿದ್ದು ಗರ್ಭಸ್ರಾವ ವಾಯಿತು. ರಾಜನಿಗೆ ಮಕ್ಕಳಿಲ್ಲದೆ ರಾಜ್ಯ ಅವನ ತಮ್ಮನ ವಶವಾಯಿತು. ಅವನ ತಮ್ಮ ದುರ್ಮಾರ್ಗನಾದುದರಿಂದ ರಾಜ್ಯ ಅರಾಜಕ ವಾಗಿ ಕಾಲಕ್ರಮೇಣ ಶತ್ರುಗಳಪಾಲಾಯಿತು.

ಬೇತಾಳ ಈ ಕಥೆ ಹೇಳಿ "ರಾಜನೇ ನನ ಗೊಂದು ಸಂದೇಹವುಂಟಾಗಿದೆ. ಅಶರೀರವಾಣಿ ಕೊಟ್ಟ ಎಚ್ಚರಿಕೆಯನ್ನು ಪಾಲಿಸದೆ ಕುನಾಲ ತಪ್ಪು ಮಾಡಿದನಲ್ಲವೆ? ಅವನಿಗೆ ಹತ್ಯೆಮಾಡಿದ ಪಾಪ, ರಾಜ್ಯಕ್ಕೆ ವಿಪತ್ತುಂಟುಮಾಡಿದ ಪಾಪ, ಆತ್ಮಹತ್ಯೆ ಮಾಡಿಕೊಂಡ ಪಾಪಗಳು ಸುತ್ತಿ ಕೊಳ್ಳುವುವೇ ಇಲ್ಲವೇ? ಈ ಪ್ರಶ್ನೆಗಳಿಗೆ ತಕ್ಕ ಸಮಾಧಾನ ತಿಳಿದೂಸಹ ನೀನು ಹೇಳದಿದ್ದರೆ ನಿನ್ನ ತಲೆ ಸಾವಿರ ಹೋಳುಗಳಾದೀತು. ಜೋಕೆ" ಎಂದಿತು.

"ಕುನಾಲನು ಯಾವ ತಪ್ಪೂ ಮಾಡಿಲ್ಲ. ಅವನಿಗೆ ಯಾವ ಪಾಪವೂ ಸೋಂಕುವುದಿಲ್ಲ. ಅಶರೀರವಾಣಿಗೆ ಭವಿಷ್ಯ ತಿಳಿದಿತ್ತೇಹೊರತು ಅದನ್ನು ಬದಲಾಯಿಸುವ ಶಕ್ತಿಯಿರಲಿಲ್ಲ. ಒಂದುವೇಳೆ ಆ ಶಕ್ತಿ ಇದ್ದಿದ್ದರೆ ಅದು ಕುನಾಲ ನಿಗೆ ಎಚ್ಚರಿಕೆ ಕೊಡುವುದಷ್ಟೇ ಅಲ್ಲದೆ, ಮುಂದಾ ಗುವುದನ್ನು ಸಕಾಲದಲ್ಲಿ ತಿಳಿಸುತಿತ್ತು. ಅರಣ್ಯ ವನ್ನು ಪ್ರವೇಶಿಸುವುದರಿಂದ ಒಂದು ಕೀಟಕ್ಕೆ ನೋವುಂಟುಮಾಡುವನೆಂದು ತಿಳಿದಿದ್ದರೂ ಕುನಾ ಲನು ಅಡವಿಯಲ್ಲಿ ಕಾಲಿಡುತ್ತಿರಲಿಲ್ಲ. ಕುನಾ ಲನು ಅರಣ್ಯ ಪ್ರವೇಶಿಸದಂತೆ, ಮೈದಾನವನ್ನು ದಾಟದಂತೆ, ಬೆಟ್ಟವನ್ನೇರದಂತೆ ತಡೆಗಟ್ಟಲು ಅಶರೀರವಾಣಿಗೆ ಶಕ್ತಿಯಿರಲಿಲ್ಲವೆಂದು ಸ್ಪಷ್ಟ ವಾಗುತ್ತದೆ. ಹಾಗಿರಲು ಮಾನವಮಾತ್ರನಾದ ಕುನಾಲನಿಗೆ ಇವುಗಳನ್ನು ತಡೆಯುವ ಶಕ್ತಿ ಇರ ಬಲ್ಲದೇ? ಆತನು ಮಾನವಧರ್ಮದಂತೆಯೇ ನಡೆದಿದ್ದಾನೆ. ಆಪತ್ತಿನಲ್ಲಿ ಧೈರ್ಯ ತೋರಿ ಸಿದ್ದಾನೆ. ಅಶರೀರವಾಣಿಯಂತೆ ಅವನಿಗೆ ಭವಿಷ್ಯ ತಿಳಿಯದು. ಅದರಿಂದ ಕುನಾಲನು ನಿರ್ದೋಷಿ" ಎಂದ ತ್ರಿವಿಕ್ರಮ.

ರಾಜನ ಮೌನ ಭಂಗವಾದ ಕೂಡಲೇ ಬೇತಾಳ ಶವದೊಂದಿಗೆ ಮಾಯವಾಯಿತು.






4

[ಮೋಹನನು ಎತ್ತಿಕೊಂಡು ಹೋದ ಭುವನಸುಂದರಿಯನ್ನು ಒಳ್ಳೆಯತನದಲ್ಲಿ ಬಿಡಿಸಿಕೊಳ್ಳಲು ಗ್ರೀಕರು ಮಾಡಿದ ಯತ್ನ ವಿಫಲವಾಯಿತು. ಟ್ರಾಯ್ ನಗರದಮೇಲೆ ದಾಳಿ ತೆಗೆಯಲು ಗ್ರೀಕರು ಅನೇಕ ರಾಜಕುಮಾರರ ಸಹಾಯ ಪಡೆದರು. ಕೆಲವರು ತಪ್ಪಿಸಿಕೊಳ್ಳಲೆತ್ನಿಸಿದರು ಅವರನ್ನೆಲ್ಲಾ ಸೇರಿಸಿ ಗ್ರೀಕರಸೇನೆ ಟ್ರಾಯ್‌ನಗರ ತೀರವನ್ನು ಸೇರಿತು.]

ಗ್ರೀಕ್ ನೌಕೆಗಳಿಂದ ಮೊತ್ತಮೊದಲು ತೀರಕ್ಕೆ ಹಾರಿದವನು ಚಂದ್ರಪ್ರಭನಾದರೆ, ಎರಡನೇಯವನು ವಜ್ರಕಾಯನು. ಅವನ ಹಿಂದೆಯೇ ಪ್ರವಾಹದಹಾಗೆ ದಬದಬನೆ ಗ್ರೀಕ್ ಸೈನ್ಯವೆಲ್ಲಾ ಇಳಿದು ಸಮರಕ್ಕೆ ಸಿದ್ಧವಾಯಿತು.

ಟ್ರೋಜನರಲ್ಲಿ ಮರಾಳನೆಂಬ ವೀರನಿದ್ದನು. ಅವನಿಗೆ ಕತ್ತಿ ಮತ್ತು ಈಟಿಗಳಿಂದ ಸಾವಿಲ್ಲವೆಂದು ವರವಿತ್ತು. ಮರಾಳನು ಚಂದ್ರಪ್ರಭನ ಸೈನ್ಯವನ್ನು ಎದುರಿಸಿ ಅನೇಕ ಗ್ರೀಕ್ ಸೈನಿಕರನ್ನು ಯಮಪುರಿಗೆ ಕಳುಹಿಸಿದನು. ಮಹಾವೀರನಾದ ವಜ್ರಕಾಯನು ಮರಾಳನನ್ನು ಎದುರಿಸಿ ಹೋರಾಡುತ್ತಿದ್ದನು. ಎಷ್ಟು ಹೊತ್ತು ಹೋರಾಡಿದರೂ ಮರಾಳನು ಸೋಲುವ ಚಿಹ್ನೆ ಕಾಣಿಸಲಿಲ್ಲ. ಆದರೆ ಮುಂದೆ ಮೈಮರೆತು ಯುದ್ಧ ಮಾಡುವಾಗ ಮರಾಳನು ಎಡವಿ ಬೀಳಲು, ವಜ್ರಕಾಯನು ಅವನ ಎದೆಯಮೇಲೆ ಹಾರಿ ಗಟ್ಟಿಯಾಗಿ ಕುಳಿತು ಅವನ ಕತ್ತು ಹಿಚುಕಿ ಕೊಂದನು.

ಮರಾಳನು ಮರಣಿಸಿದಕೂಡಲೇ ಟ್ರೋಜನ್ ಸೈನ್ಯದಲ್ಲಿ ಭಯಂಕರವಾದ ಹಾಹಾಕಾರವೆದ್ದಿತು. ಸೈನಿಕರೆಲ್ಲಾ ಬೆದರಿ, ಚದರಿ ಟ್ರಾಯ್ ನಗರಕ್ಕೆ ಹಿಮ್ಮೆಟ್ಟಿದರು. ಆತರುವಾಯ ಗ್ರೀಕರು ತಮ್ಮ

ಒಂದು ಗ್ರೀಕ್ ಪುರಾಣಕಥೆಯ ಆಧಾರದಿಂದ



ಹಡಗುಗಳನ್ನು ಸಮುದ್ರತೀರದಲ್ಲಿ ಒಂದು ಸುರಕ್ಷಿತ ಸ್ಥಳದಲ್ಲಿ ಬಿಟ್ಟು, ಟ್ರಾಯ್ ನಗರಕ್ಕೆ ಮುತ್ತಿಗೆ ಹಾಕಿದರು.

ಈ ಮುತ್ತಿಗೆ ಒಂದಲ್ಲ, ಎರಡಲ್ಲ; ಹತ್ತು ವರ್ಷಕಾಲ ನಡೆಯಿತು. ಮೊದಲು ಒಂಬತ್ತು ವರ್ಷಗಳಲ್ಲಿ ಉಭಯಪಕ್ಷಗಳ ನಡುವೆ ಹೇಳಿಕೊಳ್ಳುವಂತಹ ಯುದ್ಧ ನಡೆಯಲಿಲ್ಲವಾದರೂ ಅನೇಕ ಇತರ ಸಂಘಟನೆಗಳು ನಡೆದುವು. ಸಣ್ಣಪುಟ್ಟ ಯುದ್ಧಗಳಾಗಿ ಎಷ್ಟೋ ಪ್ರಾಣ ಹಾನಿಯಾಯಿತು.

ಟ್ರಾಯ್ ರಾಜನಾದ ವರ್ಧನನಿಗೆ ಇಬ್ಬರು ಹೆಂಡತಿಯರಿದ್ದರು. ಮೋಹನನ ತಾಯಿ ಅವನ ಎರಡನೇ ಪತ್ನಿ. ಆತನ ಐವತ್ತು ಜನ ಮಕ್ಕಳಲ್ಲಿ ಹತ್ತೊಂಬತ್ತು ಜನ ಆಕೆಯ ಪುತ್ರರು. ಅವರಲ್ಲಿ ಜೇಷ್ಠಪುತ್ರನು ವೀರಸಿಂಹ. ಇಲಿಯನೆಂಬವನು ಮತ್ತೊಬ್ಬ. ಇಲಿಯನಿಗೆ ಇಪ್ಪತ್ತು ವರ್ಷ ತುಂಬಿಬಿಟ್ಟರೆ ಆಮೇಲೆ ಟ್ರಾಯ್ ನಗರವನ್ನು ಯಾರೂ ಜಯಿಸಲಾರರೆಂದು ದೈವಜ್ಞರು ಹೇಳಿದ್ದರು.

ಆದರಿಂದ ಹೇಗಾದರೂ ಇಲಿಯನನ್ನು ಕೊಲ್ಲಲು ವಜ್ರಕಾಯನು ಸಂಕಲ್ಪಿಸಿದನು. ಒಂದು ದಿನ ಇಲಿಯನು ಒಂದು ಆಲಯದ ಪ್ರಾಂಗಣದಲ್ಲಿ ತನ್ನ ಕುದುರೆಗಳಿಗೆ ಕವಾಯಿತು ಮಾಡಿಸುತ್ತಿದ್ದನು. ಆಗ ಅನಿರೀಕ್ಷಿತವಾಗಿ ವಜ್ರಕಾಯನು ಅಲ್ಲಿಗೆ ಹೋಗಿ, ಇಲಿಯನನ್ನು ಈಟಿಯಿಂದ ತಿವಿದು ಕೊಂದನು. ಇದೊಂದು ಪ್ರಾಮುಖ್ಯ ಘಟನೆಯಾಯಿತು. ಇಲಿಯನ ಸಾವಿಗಾಗಿ ಟ್ರಾಯ್ ನಗರದ ಸಕಲ ಪ್ರಜೆ

ಗಳೂ ಶೋಕಸಾಗರದಲ್ಲಿ ಮುಳುಗಿದರು. ವರ್ಧನನ ಮಕ್ಕಳಲ್ಲಿ ವೃಕಾಕ್ಷನೆಂಬುವನು ಮತ್ತೊಬ್ಬನಿದ್ದನು. ಅವನು ತೋಟದಲ್ಲಿ ರೆಂಬೆಗಳನ್ನು ಸೀಳಿ ರಥಗಳಿಗೆ ಬೇಕಾಗುವ ಮರ ಮುಟ್ಟುಗಳನ್ನು ಸಿದ್ಧಪಡಿಸುತ್ತಿದ್ದನು.

ವಜ್ರಕಾಯನು ಒಂದು ರಾತ್ರಿ ರಹಸ್ಯವಾಗಿ ನಗರವನ್ನು ಪ್ರವೇಶಿಸಿ, ವೃಕಾಕ್ಷನಿದ್ದ ತೋಟಕ್ಕೆ ಹೋಗಿ, ಅವನನ್ನು ಸೆರೆಹಿಡಿದು ತಮ್ಮ ಶಿಬಿರಕ್ಕೆ ಕರೆದುಕೊಂಡು ಹೋದನು.

ಈ ಮುಖ್ಯ ಖೈದಿಯನ್ನು ಗ್ರೀಕ್ ನಾಯಕರು ತಮ್ಮ ಸೈನ್ಯಕ್ಕೆ ಸಾರಾಯಿ ಸರಬರಾಜು ಮಾಡುತ್ತಿದ್ದ ಒಬ್ಬ ರಾಜನಿಗೆ ಮಾರಿದರು. ಆ ರಾಜನ ಆಸ್ಥಾನದಲ್ಲಿದ್ದವರು ಯಾರೋ ವೃಕಾಕ್ಷನನ್ನು ಕಂಡು ಮರುಕಪಟ್ಟು, ರಾಜನಿಗೆ ಯಥೇಚ್ಛವಾಗಿ ಹಣ ಕೊಟ್ಟು ಅವನನ್ನು ಗುಲಾಮಗಿರಿಯಿಂದ ಪಾರುಮಾಡಿದರು. ಆದರೆ ವೃಕಾಕ್ಷನು ಬಹಳ ನಿರ್ಭಾಗ್ಯನಾಗಿದ್ದ. ಆತ ಟ್ರಾಯ್ ನಗರಕ್ಕೆ ಹಿಂತಿರುಗುತ್ತಿರಲು ದಾರಿಯಲ್ಲಿ ವಜ್ರಕಾಯನು ಅವನನ್ನು ಕಂಡು ಕೊಂದುಹಾಕಿದನು.

ವಜ್ರಕಾಯನು ಇಂತಹ ಕೆಲಸಗಳನ್ನೆಷ್ಟೋ ಮಾಡಿದ. ದೊಡ್ಡ ಯುದ್ಧವಿಲ್ಲ; ಗ್ರೀಕ್ ಸೈನಿಕರಿಗೆ ಕೆಲಸವಿರಲಿಲ್ಲ. ಆದರಿಂದ ವಜ್ರಕಾಯನು ಒಂದು ದಳವನ್ನು ಸಂಗಡ ಕರೆದುಕೊಂಡು ಟ್ರಾಯ್ ನಗರದ ಸುತ್ತಮುತ್ತಲಿದ್ದ ಹಳ್ಳಿಗಳ ಮೇಲೆ ಬಿದ್ದು ಕೊಳ್ಳೆಹೊಡೆಯಲಾರಂಭಿಸಿದನು. ಅವರು ಐಡಾ ಪರ್ವತದಮೇಲೆ ಹೋಗುವ ವೇಳೆಗೆ ಅಲ್ಲಿ ಅವರಿಗೆ ಪ್ರಶಂಸನೆಂಬಾತನು ಎದುರಾದನು.







ಗ್ರೀಕರು ಕೈಗೆ ಸಿಕ್ಕಿದ ದನಕಾಯುವವರನ್ನೆಲ್ಲಾ ಕೊಂದು ಹಾಕಿದರು. ಅವರ ದನಗಳನ್ನೆಲ್ಲಾ ವಶಪಡಿಸಿಕೊಂಡರು.

ಈ ಸಂಘಟನೆ ನಡೆದನಂತರ ಪ್ರಶಂಸನಿಗೆ ತಟಸ್ಥನಾಗಿರಲು ಸಾಧ್ಯವಾಗಲಿಲ್ಲ. ಅವನಲ್ಲಿಯೂ ಆವೇಶವುಂಟಾಯಿತು. ಅವನು ಕೂಡಲೇ ತನ್ನ ಸೈನ್ಯದೊಂದಿಗೆ ಟ್ರಾಯ್ ನಗರಕ್ಕೆ ತೆರಳಿ ಯುದ್ಧದಲ್ಲಿ ಭಾಗವಹಿಸಿದನು.

ಪ್ರಶಂಸನು ಮಹಾಯೋಧ. ಎಲ್ಲರನ್ನೂ ಅಲಕ್ಷ್ಯದಿಂದ ಕಾಣುತ್ತಿದ್ದ ವಜ್ರಕಾಯನೂ ಸಹ ಪ್ರಶಂಸನನ್ನು ಕುರಿತು ಲಘುವಾಗಿ ಎಂದೂ ಮಾತನಾಡಿರಲಿಲ್ಲ. ಇನ್ನು ಟ್ರೋಜನ್ ಸೈನಿಕರ ವಿಷಯ ಹೇಳಲಗತ್ಯವಿಲ್ಲ. ಅವರು ತಮ್ಮ ಪಕ್ಷದ ವೀರಸಿಂಹನಿಗೆ ತೋರಿದಷ್ಟೇ ಗೌರವದಿಂದ ಪ್ರಶಂಸನನ್ನು ಕಾಣುತ್ತಿದ್ದರು. ಅವನು ಯುದ್ಧಕ್ಕಿಳಿದಮೇಲೆ ಯುದ್ಧದಲ್ಲಿ ಆತನು ಅನೇಕ ಬಾರಿ ಗಾಯಗೊಂಡನಾದರೂ ಪ್ರತಿಸಾರಿಯೂ ಜೀವದೊಂದಿಗೆ ಹೊರಬಿದ್ದನು.

ಈ ಯುದ್ಧದಲ್ಲಿ ಪ್ರಶಂಸನಿಗೆ ಸಾವು ಬರೆದಿರಲಿಲ್ಲ. ಅವನ ವಂಶದವರು ಮುಂದೆ ಟ್ರಾಯ್ ನಗರವನ್ನು ಆಳಬೇಕೆಂದು ವಿಧಿ ಲಿಖಿಸಿತ್ತು.

ಟ್ರಾಯ್ ನಗರದೊಂದಿಗೆ ಸ್ನೇಹಗಳಿಸಿದ್ದ ದೊಡ್ಡ ದೊಡ್ಡ ನಗರಗಳು ಅನೇಕವಿದ್ದುವು. ಅವುಗಳಲ್ಲಿ ಅನೇಕರನ್ನು ವಜ್ರಕಾಯನು ಸೋಲಿಸಿ ವಶಪಡಿಸಿಕೊಂಡಿದ್ದನು. ಅವನವಶವಾದ ರಾಜರಲ್ಲಿ ವೀರಸಿಂಹನ ಮಾವನೂ ಒಬ್ಬ. ಗ್ರೀಕರೊಂದಿಗೆ ನಡೆದ ಹೋರಾಟದಲ್ಲಿ

ಈ ಪ್ರಶಂಸನು ಮೋಹನನ ದಾಯಾದಿ. ಮೋಹನನು ಭುವನಸುಂದರಿಯನ್ನು ಅಪಹರಿಸಿಕೊಂಡು ಬರಲು ಹೋದಾಗ ಪ್ರಶಂಸನೂಸಹ ಅವನೊಂದಿಗೆ ಹೋಗಿ ಅನೇಕ ರೀತಿ ಸಹಾಯ ಮಾಡಿದ್ದನು. ಆದಾಗ್ಯೂ ಭುವನಸುಂದರಿಯ ದೆಶೆಯಿಂದ ಗ್ರೀಕ್ ಮತ್ತು ಟ್ರೋಜನರಿಗೆ ನಡೆಯುತ್ತಿದ್ದ ಯುದ್ಧದಲ್ಲಿ ಪ್ರಶಂಸನು ತಟಸ್ಥನಾಗಿದ್ದ. ಅವನ ಸೈನ್ಯಸಹ ಈ ಯುದ್ಧದಲ್ಲಿ ಭಾಗವಹಿಸಲಿಲ್ಲ.

ಪ್ರಶಂಸನು ತನ್ನ ದನಕಾಯುವವರ ಸಂಗಡ ಐಡಾಪರ್ವತದಮೇಲಿರುವ ಸಮಯದಲ್ಲಿ ವಜ್ರಕಾಯ ಮತ್ತು ಅವನ ಸೈನಿಕರು ಅಲ್ಲಿಗೆ ಬಂದರು. ವಜ್ರಕಾಯನ ಧಾಳಿಗೆ ತಾಳಲಾರದೆ ಪ್ರಶಂಸನು ಕೆಳಗಿಳಿದು ಪರಾರಿಯಾದನು.







ಈ ರಾಜನೂ, ಅವನ ಏಳುಮಂದಿ ಮಕ್ಕಳೂ ಮರಣಹೊಂದಿದರು.

ಗ್ರೀಕ್ ಶಿಬಿರದಲ್ಲೂ ಕೆಲವಾರು ದಾರುಣ ಸಂಘಟನೆಗಳು ನಡೆದುವು.

ಒಂದು ದಿನ ರಾರಾಜನು ರೂಪಧರನನ್ನು ಕರೆದು "ನೀನು ಕ್ರೀಸ್‌ಗೆ ಹೋಗಿ ಧಾನ್ಯ ತೆಗೆದುಕೊಂಡು ಬಾ" ಎಂದು ಅಪ್ಪಣೆ ಮಾಡಿದನು. ರೂಪಧರನು ಅದೇಪ್ರಕಾರ ಹೋದ. ಆದರೆ ಧಾನ್ಯ ತರುವ ಕೆಲಸ ಅವನಿಂದಾಗಲಿಲ್ಲ. ಬದಲು ಬರಿಗೈಯಲ್ಲಿಯೇ ಹಿಂತಿರುಗಿದನು. ಅವನನ್ನು ನೋಡಿ ಗ್ರೀಕ್ ವೀರರಲ್ಲೊಬ್ಬನಾದ ಪ್ರಬೋಧನು ರೂಪಧರನೊಂದಿಗೆ "ನೀನು ಸೋಮಾರಿ. ಅಂಜುಕುಳಿ" ಎಂದು ಹಂಗಿಸಿ ಮಾತಾಡಿದನು.

"ಇದರಲ್ಲಿ ನನ್ನ ತಪ್ಪೇನೂ ಇಲ್ಲ. ಎಲ್ಲೂ ಧಾನ್ಯ ಸಿಗಲಿಲ್ಲ. ರಾರಾಜನು ನಿನ್ನನ್ನು ಕಳುಹಿಸಿದ್ದರೂ ಬರಿಗೈಯಲ್ಲೇ ಬರುತ್ತಿದ್ದೆ" ಎಂದು ಹೇಳಿದ ರೂಪಧರ.

ಪ್ರಬೋಧನಿಗೆ ರೋಷ ಬಂತು. ಅವನು ಕೂಡಲೇ ಒಂದು ಹಡಗನ್ನು ತೆಗೆದುಕೊಂಡು ಹೋಗಿ ಅದರ ತುಂಬಾ ಧಾನ್ಯ ತಂದ. ಇದನ್ನು ನೋಡಿ ರೂಪಧರನಿಗೆ ಬಹಳ ಅವಮಾನವಾಯಿತು. ಆತ ಸಮಯನೋಡಿ ಪ್ರಬೋಧನ ಮೇಲೆ ಸೇಡು ತೀರಿಸಿಕೊಳ್ಳಲು ಹವಣಿಸುತ್ತಿದ್ದನು. ಅವನು ಕೊನೆಗೊಂದು ಮಸಲತ್ತು ಮಾಡಿದ. ಅದರ ಪರಿಣಾಮ ಬಹಳ ಭಯಂಕರವಾಯಿತು.



ಒಂದು ದಿನ ರೂಪಧರನು ರಾರಾಜನಿಗೆ ಹೀಗೆ ಸುದ್ದಿ ಕಳುಹಿಸಿದ: "ರಾತ್ರಿ ನನಗೆ ಕನಸಿನಲ್ಲಿ ದೇವತೆಗಳು ಕಾಣಿಸಿಕೊಂಡು ಬಾರಿ ಸಂಚು ನಡೆಯುವುದೆಂದು ಎಚ್ಚರಿಕೆ ಕೊಟ್ಟರು. ಈ ಪ್ರಮಾದದಿಂದ ಹೊರಬೀಳ ಬೇಕೆಂದರೆ ಒಂದು ಹಗಲು, ಒಂದು ರಾತ್ರಿ ನಾವು ಶಿಬಿರವನ್ನು ಬದಲಾಯಿಸಬೇಕು"

ರೂಪಧರನ ಸೂಚನೆಯನ್ನು ಕೂಡಲೇ ರಾರಾಜನು ಜಾರಿಗೆ ತಂದನು. ಗ್ರೀಕರೆಲ್ಲರೂ ತಮ್ಮ ಶಿಬಿರವನ್ನು ಬಿಟ್ಟು ಒಂದು ರಾತ್ರಿ ಒಂದು ಹಗಲು ಬೇರೊಂದೆಡೆ ಕಳೆದರು. ಶಿಬಿರ ಖಾಲಿಯಾದ ಸಮಯದಲ್ಲಿ ರೂಪಧರನು ರಹಸ್ಯವಾಗಿ ಪ್ರಭೋಧನ ಗುಡಾರವನ್ನು ಪ್ರವೇಶಿಸಿ ಅಲ್ಲೊಂದು ಚಿನ್ನದ ನಾಣ್ಯಗಳು ತುಂಬಿದ



ಚೀಲವನ್ನು ಬಚ್ಚಿಟ್ಟನು. ತರುವಾಯ ಒಬ್ಬ ಯುದ್ಧ ಖೈದಿಯನ್ನು ಬಲಾತ್ಕಾರಮಾಡಿ ಅವನಿಂದ ಒಂದು ಪತ್ರವನ್ನು ಬರೆಯಿಸಿದನು. ವರ್ಧನನು ಪ್ರಬೋಧನಿಗೆ ಆ ಪತ್ರ ಬರೆದಂತಿತ್ತು. "ಗ್ರೀಕರನ್ನು ಮೋಸಗೊಳಿಸುವ ನಿಮಿತ್ತವಾಗಿ ನೀನು ಕೋರಿದಪ್ರಕಾರ ಹಣವನ್ನು ಕಳುಹಿಸಿರುವೆವು" ಎಂದು ಆ ಪತ್ರದಲ್ಲಿ ಬರೆದಿತ್ತು.

"ನೀನು ಕೂಡಲೇ ಈ ಪತ್ರವನ್ನು ಪ್ರಬೋಧನಿಗೆ ಮುಟ್ಟಿಸು" ಎಂದು ಆ ಯುದ್ಧ ಖೈದಿಯನ್ನು ಅಟ್ಟಿದ ರೂಪಧರ. ಆದರೆ ಅವನು ಆ ಪತ್ರವನ್ನು ಪ್ರಬೋಧನನಿಗೆ ತಲುಪಿಸುವ ಮುನ್ನವೇ ರೂಪಧರನು ತನ್ನ ಭಟರಿಂದ ಅವನನ್ನು ಕೊಲ್ಲಿಸಿದನು.



ಮಾರನೇಯ ದಿನ ಗ್ರೀಕರು ತಮ್ಮ ಹಳೆಯ ಶಿಬಿರಕ್ಕೆ ಹಿಂತಿರುಗುತ್ತಿರಲು ಶಿಬಿರದಾಚೆ ಸತ್ತು ಬಿದ್ದಿದ್ದ ಕೈದಿಯನ್ನು ನೋಡಿದರು. ಅವನ ಬಳಿಯಿದ್ದ ಕಾಗದ ಅವರಿಗೆ ಸಿಕ್ಕಿತು. ಅದು ತುಂಬಾ ಪ್ರಮಾದಕರವಾದ ಪತ್ರವಾಗಿ ಕಾಣಿಸಿದುದರಿಂದ ಅದನ್ನು ರಾರಾಜನಿಗೆ ಒಪ್ಪಿಸಿದರು. ರಾರಾಜನು ಆ ಪತ್ರವನ್ನು ಓದಿ ಪ್ರಬೋಧನನ್ನು ವಿಚಾರಣೆಗೆ ಗುರಿಮಾಡಿದನು. ಈ ಪತ್ರಕ್ಕೆ ಸಂಜಾಯಿಷಿ ಕೊಡುವಂತೆ ಒತ್ತಾಯಪಡಿಸಿದನು. ತಾನು ದೇಶದ್ರೋಹಿಯಲ್ಲವೆಂತಲೂ, ತನಗೆ ವರ್ಧನನಾಗಲೀ, ಮತ್ತೆ ಬೇರೊಬ್ಬರಾಗಲೀ ಎಂದೂ ಹಣ ಕೊಡಲಿಲ್ಲವೆಂದೂ ಪ್ರಬೋಧನು ಹೇಳಿದನು.

"ಆತನ ಗುಡಾರವನ್ನು ಹುಡುಕಿದರೆ ನಿಜ ತಿಳಿಯುವುದು" ಎಂದ ರೂಪಧರ.

ಗುಡಾರವನ್ನು ಶೋಧಿಸಿದರು. ಹಣದ ಗಂಟು ಸಿಕ್ಕಿತು. ಪ್ರಬೋಧನು ದ್ರೋಹಿ ಎಂದು ನಿರ್ದರಿಸಿದರು. ಅಂತಹ ದ್ರೋಹಿಗಳನ್ನು ಕಲ್ಲಿನಿಂದ ಹೊಡೆದು ಸಾಯಿಸುವುದು ಅಲ್ಲಿಯ ಪದ್ಧತಿಯಾಗಿತ್ತು.

ಪ್ರಬೋಧನನ್ನು ಅದೇಪ್ರಕಾರ ಗ್ರೀಕರೆಲ್ಲರೂ ಕಲ್ಲಿನಿಂದ ಹೊಡೆದು ಕೊಂದರು. ಸಾಯುವ ಮುನ್ನ "ಅಯ್ಯೋ ಸತ್ಯವೇ, ನನಗಿಂತಮೊದಲೇ ನೀನು ಸತ್ತುಹೋದೆಯಾ?" ಎಂದು ಪ್ರಬೋಧನು ಆಕ್ರೋಶಗೊಂಡನು.

ಪ್ರಬೋಧನ ಹತ್ಯೆ ತುಂಬಾ ಅಕ್ರಮವಾದುದು. ಅವನು ನಿರ್ದೋಷಿ ಮಾತ್ರವಲ್ಲ,

ಬಾರಿ ಪ್ರತಿಭಾವಂತ. ಒಂದು ಸಣ್ಣ ಸೇಡಿನಿಂದ ಒಳಸಂಚಿಗೆ ಬಲಿಯಾಗಿ ಸತ್ತ ಅವನು ಅತ್ಯಂತ ತೀಕ್ಷ್ಣಬುದ್ಧಿಯುವ. ಟ್ರಾಯ್ ನಗರವನ್ನು ಮುತ್ತಿದ ಗ್ರೀಕರಿಗೆ ಕಾಲಕಳೆಯಲು ಅವನು ಅನೇಕ ವಿನೋದಗಳನ್ನು ಏರ್ಪಡಿಸಿದ್ದನು. ಅವನು ಇನ್ನೂ ಅನೇಕ ಬಗೆಯ ಸೌಕರ್ಯ ಸೌಲಭ್ಯಗಳನ್ನು ಜನಗಳಿಗೆ ಒದಗಿಸಲಿದ್ದನು. ಅದಾವುದೂ ಇನ್ನಿಲ್ಲದೆ ಹೋಯಿತು. ಅವನು ದೀಪಸ್ತಂಭಗಳನ್ನು ಕಂಡುಹಿಡಿದ; ಕಾಲಮಾನಗಳನ್ನು ಸೃಷ್ಟಿಸಿದ; ಲಿಪಿಯನ್ನು ಕಂಡುಹಿಡಿದ; ಪಹರೆಕಡೆಯನ್ನು ವ್ಯವಸ್ಥಿತ ಪದ್ಧತಿಯಲ್ಲಿ ನಡೆಸುವ ರೀತಿ ಕಂಡುಹಿಡಿದ. ಇನ್ನೂ ಅನೇಕ ಯುದ್ಧತಂತ್ರಗಳನ್ನೂ ಜ್ಯಾರಿಗೆ ತಂದಿದ್ದ. ಗ್ರೀಕರು ಅವನಿಗೆ ಅನೇಕ ವಿಧಗಳಲ್ಲಿ ಋಣಿಗಳಾಗಿದ್ದರು.

ಗ್ರೀಸ್‌ದೇಶದಲ್ಲಿದ್ದ ಪ್ರಬೋಧನ ತಂದೆಗೆ ಮಗನ ಹತ್ಯೆಯ ವಿಷಯ ತಿಳಿಯಿತು. ಆತನು ಟ್ರಾಯ್‌ನಗರಕ್ಕೆ ಬಂದು "ನನ್ನ ಮಗನನ್ನು ಯಾವ ಕಾರಣದಿಂದ ಕೊಲ್ಲಿಸಿದಿರಿ? ಅವನು ದ್ರೋಹಿ ಎಂದು ಹೇಗೆ ನಿರ್ಧರಿಸಿದಿರಿ!" ಎಂದು ರಾರಾಜನನ್ನು ಕೇಳಿದ.

ರಾರಾಜನು ಆತನಿಗೆ ಸಂಜಾಯಿಷಿ ಕೊಡಲು ನಿರಾಕರಿಸಿದನು. ಪ್ರಬೋಧನನು ನಿಷ್ಕಾರಣವಾಗಿ ಹತ್ಯೆ ಮಾಡಲ್ಪಟ್ಟನೆಂದೂ, ರೂಪಧರನ ದ್ರೋಹದಿಂದ ಈ ಕೆಲಸ ನಡೆಯಿತೆಂದೂ ರಾರಾಜನಿಗೆ ತಿಳಿದಿರಬೇಕು. ಆದರೂ ಆತನು ರೂಪಧರನ ಮೇಲಿನ ಆದರದಿಂದ, ಅಭಿಮಾನದಿಂದ ಮತ್ತು ಹೆಚ್ಚಿನ ಗೊಂದಲಕ್ಕೆ ಆಸ್ಪದವಾದೀತೆಂಬ ಕಾರಣದಿಂದ ಪ್ರಬೋಧನ ತಂದೆಯ ಆಕ್ಷೇಪಣೆಯನ್ನು ತಳ್ಳಿಹಾಕಿದನು.

ತಾನು ಬಂದ ಕೆಲಸವಾಗಲಿಲ್ಲವೆಂದು ನೊಂದುಕೊಂಡೇ ಪ್ರಬೋಧನ ತಂದೆ ಗ್ರೀಸಿಗೆ ಹಿಂತಿರುಗಿದನು. ಕೆಲವು ಗ್ರೀಸ್ ವೀರರ ಸತಿಯರೊಂದಿಗೆ "ನಿನ್ನ ಗಂಡ ಯಾರೋ ಟ್ರಾಯ್ ನಗರದ ಸ್ತ್ರೀಯನ್ನು ವಿವಾಹವಾಗಿ ಸಂಗಡ ಕರೆತರುತ್ತಿರುವನು. ಇನ್ನು ಮುಂದೆ ಆಕೆಯೇ ನಿನಗೆ ಯಜಮಾನಿ ಆಗುವಳು" ಎಂದು ಸುಳ್ಳು ಹೇಳಿದನು.

ಇದನ್ನು ಕೇಳಿ ಮನವೊಡೆದು ಗ್ರೀಕ್ ಸ್ತ್ರೀಯರು ಕೆಲವರು ಆತ್ಮಹತ್ಯೆಮಾಡಿಕೊಂಡರು.

[ಇನ್ನೂ ಇದೆ]



# ಅಳುವಿಗೆ ಕಾರಣ

**ಪೂ**ರ್ವಕಾಲದಲ್ಲಿ ಒಬ್ಬ ಕೆಟ್ಟ ಅರಸನಿದ್ದ. ಅವನನ್ನು ನೋಡಿ ಪ್ರಜೆಗಳು ಹುಲಿಯನ್ನು ನೋಡಿದಹಾಗೆ ಹೆದರುತ್ತಿದ್ದರು. ಇನ್ನು ಅರಮನೆಯಲ್ಲಿದ್ದ ನೌಕರರ ಮಾತು ಕೇಳಲೇಬೇಡ. ಅವರಿಗೆ ದಿನಗಂಡ ಕ್ಷಣಗಂಡಗಳು. ಅಂತೂ ಸ್ವಲ್ಪ ಕಾಲದಲ್ಲೇ ಆ ರಾಜ ಸತ್ತುಹೋಗಿಬಿಟ್ಟ.

ಪ್ರಜೆಗಳಿಗೊಂದು ಪೀಡೆ ಹೋಯಿತು. ಯುವರಾಜ ಬಹಳ ಒಳ್ಳೆಯವ. ಪ್ರಜೆಗಳೆಂದರೆ ಅವನಿಗೆ ಬಹಳ ಇಷ್ಟ. ಕೆಟ್ಟ ಅರಸ ಸತ್ತುಹೋದುದಕ್ಕೂ, ಒಳ್ಳೆಯವನು ಅರಸನಾಗುವದಕ್ಕೂ ಎಲ್ಲರೂ ಸಂತೋಷಪಟ್ಟರು. ಉತ್ಸವ, ಮೆರವಣಿಗೆ, ಔತಣ, ವಿನೋದ ಬಹುಜೋರಾಗಿ ಸಾಗಿದುವು. ಇವುಗಳಲ್ಲಿ ಹೊಸ ಅರಸಕೂಡಾ ಭಾಗವಹಿಸಿದ.

ಅರಸನು ಮೆರವಣಿಗೆಗೆ ಪಲ್ಲಕ್ಕಿಯೇರಿ ಅರಮನೆಯಿಂದ ಹೊರಟಾಗ ಅವನಿಗೊಂದು ವಿಚಿತ್ರದೃಶ್ಯವು ತೋರಿತು. ರಾಜಭವನದ ನೌಕರನೊಬ್ಬ ಕಣ್ಣೀರಿಳಿಸುತ್ತಾ ಮುಂಡಾಸಿನ ಕೊನೆಯಿಂದ ಕಣ್ಣನ್ನೊರೆಸುತ್ತಾ ಇದ್ದ.

ಅರಸ ಆತನನ್ನು ಬಳಿಗೆ ಕರೆದು—"ಏನೊ? ದೇಶದಲ್ಲಿ ಪ್ರಜೆಗಳೆಲ್ಲಾ ಆನಂದದಿಂದ ಓಲಾಡುತ್ತಿದ್ದರೆ ನೀನೇಕೆ ಅಳುತ್ತಿ? ನನ್ನ ತಂದೆ ಸತ್ತುಹೋದುದಕ್ಕೆ ಅಳುತ್ತಿರುವಿಯಾ?" ಎಂದು ಕೇಳಿದ.

ಅದಕ್ಕೆ ನೌಕರ "ಇಲ್ಲ ಪ್ರಭೂ, ಗತಿಸಿದ ಮಹಾರಾಜರು ದಿನಾ ಬೆಳಗ್ಗೆ ಮೆಟ್ಟಿಲಿಳಿದು ಬರುತ್ತಾ ಯಾವ ಕಾರಣವೂ ಇಲ್ಲದೆ ನನ್ನ ನೆತ್ತಿಗೆ ಎಂಟು ಪೆಟ್ಟು ಕೊಡುತ್ತಿದ್ದರು. ಅವರೀಗ ನರಕಕ್ಕೆ ಹೋಗಿದ್ದಾರೆ. ಅಲ್ಲಿದ್ದ ಯಮಕಿಂಕರರು ಅವರ ಬಾಧೆಯನ್ನು ಸಹಿಸದೆ ಮತ್ತೆ ಇಲ್ಲಿಗೇ ಕಳುಹಿಸಿಬಿಡುತ್ತಾರೋ ಅಂತ ಭಯವಾಗಿ ಅಳುತ್ತಿದ್ದೇನೆ" ಎಂದ.

ಇದನ್ನು ಕೇಳಿ ರಾಜನೂ ಅವನ ಪರಿವಾರವೂ ಬಿದ್ದು ಬಿದ್ದು ನಕ್ಕರು.





# ವಿಚಿತ್ರವಾದ ವ್ಯಾಧಿ

ಬಹಳಕಾಲದ ಹಿಂದೆ ಒಂದಾನೊಂದು ಹಳ್ಳಿಯಲ್ಲಿ ರಂಗಮ್ಮ, ಭರಮಪ್ಪ ಎಂಬ ಬಡ ದಂಪತಿಗಳಿದ್ದರು. ಅವರಿಗೆ ಮಕ್ಕಳು ಮರಿ ಇರಲಿಲ್ಲ. ಇಬ್ಬರಿಗೂ ವೃದ್ಧಾಪ್ಯ ಸಮೀಪಿಸುತಿತ್ತು. ಭರಮಪ್ಪ ಮೊದಲಿಂದಲೂ ಮುಂಗೋಪಿ. ವಯಸ್ಸಾದಂತೆ ಅವನ ದೇಹದಲ್ಲಿ ಶಕ್ತಿ ಕಮ್ಮಿಯಾಗುತಿತ್ತು. ಕೋಪವೂ ಹೆಚ್ಚಾಗುತಿತ್ತು. ಅಷ್ಟಿಷ್ಟಕ್ಕೆಲ್ಲಾ ರೇಗಾಡುವನು. ಹೆಂಡತಿಯ ಮೇಲೆ ಕೈಮಾಡಿಕೊಳ್ಳುವುದು ಆತನ ದಿನಚರಿಯಾಗಿಬಿಟ್ಟಿತು.

ರಂಗಮ್ಮನಿಗೆ ಮಕ್ಕಳಿಲ್ಲವೆಂಬ ಚಿಂತೆ ಮನವನ್ನು ಕೊರೆಯುತಿತ್ತು. ಅದರಮೇಲೆ ಗಂಡನ ಮುಂಗೋಪ, ಮಾತಿಗೆ ಮುಂಚೆ ಹೊಡೆಯುವುದು, ಬಡಿಯುವುದು ಆಕೆಯನ್ನು ಮತ್ತಷ್ಟು ವ್ಯಥೆಗೀಡುಮಾಡುತಿತ್ತು.

'ಈ ಮುದುಕನಿಗೆ ಏಟಿನ ರುಚಿ ಒಂದುಸಾರಿ ಯಾರಾದರೂ ತೋರಿಸಿದರೆ ಸೊಗುಸಾಗಿರುತ್ತದೆ' ಎಂದಕೊಂಡಳು ರಂಗಮ್ಮ. ಆ ಸಮಯಕ್ಕಾಗಿ ಕಾದುನೋಡುತ್ತಿದ್ದಳು.

ಒಂದು ದಿನ ಆ ಸಮಯ ಒದಗಿಬಂತು. ಇಷ್ಟಕ್ಕೂ ಪಾಪ, ಭರಮಪ್ಪನಿಗೆ ಕಾಲಕರ್ಮ ಕೂಡಿಕೊಂಡು ಬರಲಿಲ್ಲ.

ಬೆಳಗ್ಗೆ ಹಾಸಿಗೆಯಿಂದ ಎದ್ದಕೂಡಲೇ ಸಣ್ಣಪುಟ್ಟ ಕಾರಣಗಳಿಗೆಲ್ಲಾ ರಂಗಮ್ಮನನ್ನು ಪೀಡಿಸಿ, ಹೊಡೆದು, ಸಿಟ್ಟಿನಭರದಲ್ಲಿ ಅಡವಿಗೆ ಹೊರಟುಬಿಟ್ಟನು. ಆತನು ಹೀಗೆಯೇ ದಿನಾ ಕೊಡಲಿಯನ್ನು ಭುಜದಮೇಲೆ ಹಾಕಿಕೊಂಡು ಅಡವಿಗೆ ಹೋಗಿ ಕೈಲಾದಷ್ಟು ಸೌದೆ ಸೀಳಿಕೊಂಡು ಬರುವುದು ಪದ್ಧತಿ.

ಅಂದು ಭರಮಪ್ಪ ಹೆಂಡತಿಗೆ ನಾಲ್ಕು ಪೆಟ್ಟುಕೊಟ್ಟು ಅಡವಿಗೆ ಹೋದನಷ್ಟೆ. ಅವನು ಅತ್ತ ಹೋದಕೂಡಲೇ ಜಮೀನುದಾರನ ಮನೆಯ ನೌಕರರು ಬಂದರು. ಅವರು ರಂಗಮ್ಮನ ಮನೆಯ ಬಾಗಿಲನ್ನು ಜೋರಾಗಿ ಬಡಿದು, "ಯಾರು ಒಳಗೆ?" ಎಂದು ದರ್ಪದಿಂದ ಕೇಳಿದರು.

ಆಗಿನಕಾಲದಲ್ಲಿ ಜಮೀನುದಾರರ ನೌಕರರು ಆ ರೀತಿ ಜಬರದಸ್ತು ಮಾಡುವುದು ಸರ್ವ

ಬಿ. ಎಸ್. ಭಟ್ಟ





ಸಾಮಾನ್ಯವಾಗಿತ್ತು. ರಂಗಮ್ಮ ಕೂಡಲೇ ಬಂದು ಬಾಗಿಲು ತೆರೆದಳು. ಜಮೀನು ದಾರನ ನೌಕರರು ಅವಳನ್ನು ದುರುಗುಟ್ಟಿ ನೋಡುತ್ತಾ "ಎನಮ್ಮಾ? ಈ ಹಳ್ಳಿಯಲ್ಲಿ ನಾಟಿವೈದ್ಯ ಮಾಡುವವರು ಯಾರಾದರೂ ಇದ್ದಾರೆಯೇ" ಎಂದು ಕೇಳಿದರು.

ಈ ಪ್ರಶ್ನೆ ಕೇಳಿದಕೂಡಲೇ ರಂಗಮ್ಮನಿಗೆ ಹಿಡಿಸಲಾರದಷ್ಟು ಆನಂದವುಂಟಾಯಿತು. "ಮೂರು ಕೋಟಿ ದೇವತೆಗಳೇ! ನಿಮಗೆ ನಮ ಸ್ಕಾರ, ಉದ್ದಂಡನಮಸ್ಕಾರ ಸ್ವಾಮಿ!" ಎಂದು ತನ್ನ ಮನಸ್ಸಿನಲ್ಲೇ ವಂದಿಸಿಕೊಂಡು, ಆಮೇಲೆ ಹೀಗೆಂದಳು:

"ನಾಟಿವೈದ್ಯ ತಿಳಿದವರಿಲ್ಲದೇನು? ಒಬ್ಬಾತ ನಿದ್ದಾನೆ. ಅವರು ಬೇರೆ ಯಾರೂಅಲ್ಲ. ನಮ್ಮ ಯಜಮಾನರು. ಅಲ್ಲ, ಈಗ ಯಾರಿಗೆ ಜಡ್ಡಾ ಗಿದೆ? ಏನು ಸಮಾಚಾರ?" ಎಂದು ಕೇಳಿ ದಳು ರಂಗಮ್ಮ.

ಜಮೀನುದಾರನ ನೌಕರರು ಎಲ್ಲ ಸಂಗತಿ ಯನ್ನು ಆಕೆಗೆ ತಿಳಿಸಿದರು. "ಜಮೀನುದಾರರ ಮಗಳಿಗೆ ಜಡ್ಡಾಗಿದೆ. ಮಹಾ ಮಹಾ ಪಂಡಿ ತರು ಬಂದು ಬಹಳ ಪರೀಕ್ಷೆನಡೆಸಿ, ಅನೇಕ ಬಗೆಯ ಚಿಕಿತ್ಸೆ ನಡೆಸಿದರೂ ರೋಗ ಗುಣ ವಾಗಲಿಲ್ಲ. ಆದ್ದರಿಂದ ಈಗ ನಾಟಿವೈದ್ಯರಿಂದ ಚಿಕಿತ್ಸೆ ನಡೆಸುವ ಯೋಚನೆಮಾಡಿದ್ದಾರೆ.

"ನಮ್ಮ ಯಜಮಾನರು ಎಷ್ಟೇ ಆಪತ್ತಿ ನಲ್ಲಿದ್ದವರನ್ನೂ ಸಹ ತನ್ನ ಪಾಂಡಿತ್ಯದಿಂದ ತಟಕ್ಕನೆ ಗುಣಪಡಿಸುವರು. ನೋಡಿ, ಒಂದೆ ರಡು ದಿನಗಳ ಹಿಂದೆ ಡುಬ್ಬರಂಗಣ್ಣನ ಮಗ ಗುಡಿಯ ಗೋಪುರದಮೇಲಿಂದ ಕೆಳಗೆ ಬಿದ್ದು ಕಾಲು ಮುರಿದುಕೊಂಡ. ಕೂಡಲೇ ನಮ್ಮ ಯಜಮಾನರಬಳಿಗೆ ಜನ ಓಡಿಬಂದು ಕೂಗಿ ಕೊಂಡರು. ನಮ್ಮ ಯಜಮಾನರು ಹೋಗಿ, ಯಾವುದೋ ಒಂದು ತೈಲವನ್ನು ಕಾಲಿಗೆ ಲೇಪಿಸಿ ದರು. ಇನ್ನು ನೋಡಬೇಕಾಗಿತ್ತು ಆ ಸೋಜಿಗ. ಆ ಹುಡುಗ ತಟಕ್ಕನೆ ಸೆಟೆದು ನಿಂತು ಮತ್ತೆ ಗೋಪುರದ ಮೇಲೇರಿದ!"

ರಂಗಮ್ಮನ ಮಾತು ನಂಬಿ ಜಮೀನುದಾರ ಸೇವಕರು ತಮ್ಮ ಶ್ರಮ ಫಲಿಸಿತೆಂದು ಸಂತೋಷಗೊಂಡರು.

"ಅವರೆಲ್ಲಿದ್ದಾರೆ, ಬೇಗ ಹೇಳಿ" ಎಂದು ರಂಗಮ್ಮನನ್ನು ಅವಸರಪಡಿಸಿದರು.



"ಕಟ್ಟಿಗೆ ಸೀಳಿತರಲು ಅಡವಿಗೆ ಹೋಗಿದ್ದಾರೆ" ಎಂದಳು ರಂಗಮ್ಮ.

"ಆರೆ, ಅಂತಹ ಘನ ಪಂಡಿತರು ಕಟ್ಟಿಗೆ ಸೀಳುವುದೇ? ಬಹಳ ವಿಚಿತ್ರವಾಗಿದೆ" ಎಂದು ವಿಸ್ಮಯ ಸೂಚಿಸಿದರು ಆ ನೌಕರರು.

"ವಿಚಿತ್ರವೇನು ಬಂತು ವಿಚಿತ್ರ" ಎಂದಳು ರಂಗಮ್ಮ. ತರುವಾಯ ಕೈ ಆಡಿಸುತ್ತಾ "ಅವರು ಇತರೇ ವೈದ್ಯರಂತಲ್ಲ. ಒಂದುಸಾರಿ ಪಕ್ಕಾ ರೈತನಂತೆ ಬಟ್ಟೆ ಧರಿಸುವರು. ರೋಗಿಗಳಿಗೆ ಔಷಧಿ ಕೊಡುತ್ತಿರುತ್ತಿದ್ದರೆ, ಇದ್ದಕ್ಕಿದಂತೆ ಏನೋ ಯೋಚಿಸಿಕೊಂಡು ಎಲ್ಲಿದ್ದವರನ್ನು ಅಲ್ಲೇ ಬಿಟ್ಟು, ಯಾರಿಗೂ ಹೇಳದೆ ಕೇಳದೆ ಅಲ್ಲಿಂದ ಪರಾರಿಯಾಗುತ್ತಾರೆ. ಈ ನಡುವೆ ತನಗೆ ವೈದ್ಯ ಬರುವುದಿಲ್ಲವೆಂದು ಅವರಿವರ ಹತ್ತಿರ ಹೇಳುತ್ತಿರುತ್ತಾರೆ. ಇನ್ನು ನಿಮ್ಮ ಜಮೀನುದಾರನ ಮಗಳ ಅದೃಷ್ಟ. ಆದರೆ ಪಾಪ, ನಿಮಗಾಗಿ ಒಂದು ರಹಸ್ಯ ಹೇಳುತ್ತೇನೆ. ನಿಮ್ಮ ಕೈಯಲ್ಲಿರುವ ಕೋಲಿಗೆ ಕೆಲಸ ಕೊಟ್ಟರೆ ತಾವು ವೈದ್ಯರೆಂದು ಒಪ್ಪಿಕೊಂಡು ನಿಮ್ಮೊಂದಿಗೆ ಬರಲು ಸಮ್ಮತಿಸಬಹುದು" ಎಂದಳು ರಂಗಮ್ಮ.

ರಂಗಮ್ಮ ಹೇಳಿದುದನ್ನು ಕೇಳಿ ಜಮೀನುದಾರನ ನೌಕರರು ನಕ್ಕುಬಿಟ್ಟರು.

ಅವರಲ್ಲೊಬ್ಬ "ನೀವು ಹೇಳುವುದು ನಿಜ. ಬಹಳ ಬುದ್ಧಿವಂತರೆಲ್ಲಾ ಅಷ್ಟೇ. ಅವರಿಗೆ ತಿಳುವಳಿಕೆಯೊಂದಿಗೆ ತಿಕ್ಕಲೂಸಹ ಇರುತ್ತವೆ. ಅದೆಲ್ಲಾ ನಾವು ನೋಡಿಕೊಳ್ಳುತ್ತೇವೆ" ಎಂದ.

ತರುವಾಯ ಆ ನೌಕರರು ಅಡವಿಗೆ ಹೋಗಿ ಸೌದೆ ಸೀಳುತ್ತಿದ್ದ ಭರಮಪ್ಪನನ್ನು ನೋಡಿದರು.



"ನೀವೇಯೇ ಭರಮಪ್ಪ" ಎಂದು ಅವನನ್ನು ಜೋರಾಗಿ ಜಬರಿಸಿ ಕೇಳಿದರು ಅವರು.

"ಹೌದು.....ಇಲ್ಲ" ಎಂದ ಭರಮಪ್ಪ ಮುಖ ಸೊಟ್ಟಗೆಮಾಡಿ. "ಆತನೊಂದಿಗೆ ನಿಮಗೇನು ಕೆಲಸವೋ ತಿಳಿದಹೊರತು ಆತನು ಯಾರೆಂದು ನಿಮಗೆ ತಿಳಿಯದು" ಎಂದ, ಅನುಮಾನಸ್ಪದ ವಾಗಿ ಅವರಕಡೆ ನೋಡುತ್ತಾ.

ಅದಕ್ಕೆ ಜಮೀನುದಾರನ ನೌಕರರು, "ಅಯ್ಯಾ, ನಾವು ನಿಮ್ಮ ಹಿರಿಯಮ್ಮನನ್ನು ಕೇಳಿರುವೆವು. ನಿಮ್ಮಿಂದ ನಮಗೆ ಸಹಾಯ ಬೇಕಾಗಿದೆ" ಎಂದರು. "ಹಾಗಾದರೆ ಸರಿ. ನೀವು ನನ್ನ ಘನತೆಯನ್ನು ಕುರಿತು ಕೇಳಿರು ವುದೂ ನಿಜವೇ! ನೊಗ, ಮೇಟಿ ಮುಂತಾದು ವನ್ನು ಕೆತ್ತುವುದರಲ್ಲಿ ನಾನು ತುಂಬಾ ಪ್ರವೀಣ" ಎಂದ ಭರಮಪ್ಪ. "ಭಾರಿ ವೈದ್ಯರಾಗಿರುವಿರಿ ನೀವು. ನಿಮ್ಮ ವಿಷಯ ನಮಗೆ ಗೊತ್ತಿಲ್ಲವೆಂದು ಕೊಂಡಿರಾ? ಹೀಗೆಲ್ಲಾ ಮಾತಾಡವುದು ಸರಿ ಯಲ್ಲ" ಎಂದರು ಜಮೀನುದಾರನ ನೌಕರರು.

ಬಹುಶಃ ಇವರು ಯಾರೋ ಹುಚ್ಚರಿರ ಬೇಕೆಂದು ಭಾವಿಸಿದ ಭರಮಪ್ಪ.

"ವೈದ್ಯ? ನಾನೆಂದೂ ವೈದ್ಯ ಮಾಡಿಲ್ಲ ವಲ್ಲಾ" ಎಂದ ಭರಮಪ್ಪ.

ಜಮೀನುದಾರನ ನೌಕರರು ಒಬ್ಬರ ಮುಖ ವನ್ನೊಬ್ಬರು ನೋಡಿಕೊಂಡು "ಆಕೆ ಹೇಳಿದ್ದು ನಿಜ" ಎಂದು ಪಿಸುಗುಟ್ಟಿದರು.

ಮರುಕ್ಷಣವೇ ತಮ್ಮ ಕೈಯಲ್ಲಿದ್ದ ದೊಣ್ಣೆ ಗಳಿಂದ ಭರಮಪ್ಪನನ್ನು ಬಡಿದರು. ಅವನು ಲಬೋ ಲಬೋ ಎಂದು ಗೋಳಿಟ್ಟ. ತಾನು





ವೈದ್ಯನಲ್ಲವೆಂದು ಪರಿಪರಿಯಾಗಿ ಹೇಳಿದ. ಗೋಳಾಡಿದಷ್ಟೂ ಹೊಡೆತಗಳು ಬಲವಾಗುತ್ತಿದ್ದುವು. ಕಡೆಗೆ ಭರಮಪ್ಪ ತಾನು ಒಬ್ಬ ವೈದ್ಯನೆಂದು ಒಪ್ಪಿಕೊಳ್ಳಲೇ ಬೇಕಾಯಿತು. ಆಗ ತಾನೇ ಏಟು ಬೀಳುವುದು ನಿಂತಿತು.

ನೌಕರರು ಭರಮಪ್ಪನನ್ನು ಜಮೀನುದಾರನ ಬಳಿಗೆ ಕರೆದುಕೊಂಡು ಹೋದರು. ಜಮೀನುದಾರನು ಅವನನ್ನು ಆದರದಿಂದ ಸ್ವಾಗತಿಸಿ "ಪಂಡಿತೋತ್ತಮರೇ, ನಿಮಗಾಗಿ ಎದುರು ನೋಡುತ್ತಿದ್ದೇನೆ. ಬನ್ನಿ ದಯಮಾಡಿಸಿ" ಎಂದು ಒಳಗೆ ಕರೆದುಕೊಂಡ ಹೋದನು.

ಭರಮಪ್ಪನನ್ನು ರೋಗಿಯಿದ್ದ ಕೋಣೆಗೆ ಕರೆದುಕೊಂಡು ಹೋದನು. "ನಿನ್ನ ದೇಹಸ್ಥಿತಿ ಹೇಗಿದೆ ತಾಯಿ" ಎಂದು ಕೇಳಿದ ಭರಮಪ್ಪ ರೋಗಿಯನ್ನು ನೋಡಿ. ಆ ಹುಡುಗಿ ಕ್ಷೀಣ ಸ್ವರದಲ್ಲಿ ರಾಗ ರಾಗವಾಗಿ ನಿಲ್ಲಿಸಿ ನಿಲ್ಲಿಸಿ ಏನೋ ಗೊಣಗಿದಳು.

"ನಿಮ್ಮ ಮಗಳು ಮಾತನಾಡುತ್ತಿರುವ ಭಾಷೆಯಾವುದೋ ಒಂದು ಚೂರೂ ನನಗೆ ಅರ್ಥವಾಗುತ್ತಿಲ್ಲ" ಎಂದ ಭರಮಪ್ಪ ವಿನೀತನಾಗಿ. ಅದಕ್ಕೆ ಜಮೀನುದಾರನು ವಿನಯದಿಂದ: "ಅಯ್ಯಾ, ಮಗುವಿಗೆ ಹಠಾತ್ತನೆ ಮಾತು ನಿಂತುಹೋಯಿತು. ವಿವಾಹ ಮುಹೂರ್ತವನ್ನೂ ನಿಶ್ಚಯಿಸಿಬಿಟ್ಟಿದ್ದೆವು. ನಾನು ಬಹಳ ಇಕ್ಕಟ್ಟಿನಲ್ಲಿ ಬಿದ್ದೆ. ಮಗುವಿನ ಜಡ್ಡು ಏನು?" ಎಂದು ಹೇಳಿದ.

"ವ್ಯಾಧಿ ಏನು? ಮಾತು ನಿಂತು ಹೋಗಿದೆ ಅಷ್ಟೇನೇ" ಎಂದ ಭರಮಪ್ಪ.

"ವ್ಯಾಧಿಗೆ ಕಾರಣವೇನೋ ತಿಳಿಸಿದರೆ...." ಎಂದ ಜಮೀನುದಾರ.

ಭರಮಪ್ಪ ತಲೆಯಾಡಿಸುತ್ತ "ಕಾರಣ ವೇನಿದೆ.... ನಾಲಗೆ ಕೆಲಸಮಾಡುವುದು ನಿಂತು ಹೋಗಿದೆ. ಇದರ ಕಾರಣಗಳನ್ನು ಕುರಿತು ವಾಲ್ಮೀಕಿ ಒಂದು ಮಹಾ ಗ್ರಂಥವನ್ನೇ ಬರೆದಿದ್ದಾನೆ. ಆತ ತುಂಬಾ ಮೇಧಾವಿ. ಒಂದಂಗುಲ ನನಗಿಂತಲೂ ಎತ್ತರವಿದ್ದಾನೆ ಆಸಾಮಿ. ನಿಮಗೆ ಸಂಸ್ಕೃತ ಬರುತ್ತದೆಯೇ? ಓ, ಬರೊಲ್ಲವೇ? ಸರಿ, ಈ ವ್ಯಾಧಿಯನ್ನು ಕುರಿತು ಸರ್ವವನ್ನು ಒಂದು ಸಂಸ್ಕೃತಪದದಲ್ಲಿ ಹೇಳಿದ್ದಾನೆ. ನಾಲಿಗೆಯನ್ನು ಕದಲಿಸುವ ನರಗಳು ಕೆಲವು ನಮ್ಮ ಶರೀರದಲ್ಲಿರುತ್ತವೆ" ಎಂದ

ಭರಮಪ್ಪ ತಡಬಡಿಸದೆ. ಜಮೀನುದಾರನು ಆಸ್ಥೆಯಿಂದ ಕೇಳಲಾರಂಭಿಸಿದ. ತರುವಾಯ ಶರೀರಶಾಸ್ತ್ರದಮೇಲೆ ಒಂದು ಪುಟ್ಟ ಉಪನ್ಯಾಸ ವನ್ನೇ ಕೊಟ್ಟ ಭರಮಪ್ಪ.

ಜಮೀನುದಾರನು ಎಲ್ಲವನ್ನೂ ಕೇಳಿ "ನನಗೆ ಒಂದೇ ಒಂದು ಸಂದೇಹ. ನೀವು ಶರೀರಶಾಸ್ತ್ರ ವನ್ನು ಕುರಿತು ಅನೇಕ ವಿಷಯಗಳನ್ನು ಹೇಳಿ ದಿರಿ. ಸರಿ. ಆದರೆ ಮಾನವನ ಹೃದಯ ಬಲ ಗಡೆಯಿರುವುದೆಂದು ನೀವೀಗ ಹೇಳಿದಿರಿ. ಅದು ಎಡಗಡೆಯಲ್ಲೇ ಇರುವುದು ಎಂದು ನಾನು ಕೇಳಿದ್ದೇನೆ" ಎಂದ.

ಅದಕ್ಕೆ ಭರಮಪ್ಪ ತುಸವಾದರೂ ಬೆದರದೆ "ಹೌದು ಪೂರ್ವಕಾಲದಲ್ಲಿ ಆ ರೀತಿಯಿತ್ತು. ಆದರೆ ಈಗ ಅದೆಲ್ಲಾ ಕಾಲಕ್ಕೆ ತಕ್ಕಹಾಗೆ ಅದಲುಬದಲಾಗಿದೆ" ಎಂದ.

"ಏನೋ ತಿಳಿಯದೆ ಕೇಳಿದೆ. ಕ್ಷಮಿಸಬೇಕು. ನಾನು ಹಿಂದಿನಕಾಲದ ಮನುಷ್ಯ. ಈಗ ಆಗುತ್ತಿರುವ ಬದಲಾವಣೆಗಳು ನನಗೆ ತಿಳಿಯವು" ಎಂದ ಜಮೀನುದಾರ.

ತರುವಾಯ ಭರಮಪ್ಪ ಜಮೀನುದಾರನ ಮಗಳ ನಾಡಿಯನ್ನು ಪರೀಕ್ಷಿಸಿ "ರೋಗ ಪ್ರಾರಂಭ ದಶೆಯಲ್ಲಿದೆ. ಅನ್ನವನ್ನು ಮುದ್ದೆ ಮಾಡಿ ಮಜ್ಜಿಗೆಯಲ್ಲಿ ನೆನೆಸಿ ತಿನ್ನಿಸಿ. ಕೂಡಲೇ ಗುಣಕೊಡುತ್ತದೆ. ಗಿಣಿಗಳು ತಿನ್ನುವುದು ಈ ಆಹಾರ ತಾನೆ! ಅವು ಎಷ್ಟು ಸೊಗುಸಾಗಿ ಮಾತನಾಡುತ್ತವೆ" ಎಂದ. ಜಮೀನುದಾರನಿಗೆ ಭರಮಪ್ಪನ ಮೇಲೆ ಪೂಜ್ಯಭಾವ ವುಂಟಾ



ಯಿತು. ಬೇಡ ಬೇಡವೆಂದರೂ ಯಥೇಚ್ಛವಾಗಿ ಹಣ ಕೊಟ್ಟನು. ಸಮಯಮಾಡಿಕೊಂಡು ಮತ್ತೊಂದುಸಾರಿ ದಯಮಾಡಿಸಿ ರೋಗಿಯನ್ನು ನೋಡಬೇಕೆಂದು ಆತ ಕೋರಿದನು. ಒಪ್ಪಿ ಕೊಂಡನು ಭರಮಪ್ಪ.

ಭರಮಪ್ಪನು ಮನೆಗೆ ಬರುವವೇಳೆಗೆ, ಮನೆಯ ಬಾಗಿಲ ಬಳಿಯಲ್ಲಿ ಒಬ್ಬ ಯುವಕನು ಕಾಣಿಸಿದ. ಆತ ಯಾರೋ ಹೊಸಬನಾಗಿದ್ದ.

ಭರಮಪ್ಪ "ಯಾರು ನೀವು" ಎಂದು ಕೇಳಿದ. ಅದಕ್ಕೆ ಅವನು "ಅಯ್ಯಾ, ನೀವು ಘನ ಪಂಡಿತರೆಂದು ತಿಳಿದು ನಿಮ್ಮ ಬಳಿಗೆ ಬಂದಿರು ವೆನು. ಜಮೀನುದಾರರ ಮಗಳಿಗೆ ಮಾತು ನಿಂತು ಹೋದುದು ಶುದ್ಧ ಸುಳ್ಳು. ತಂದೆ ಗೊತ್ತುಮಾಡಿದ ವರನನ್ನು ಮದುವೆಯಾಗಲು

ಇಷ್ಟವಿಲ್ಲದೆ ಮಾತು ನಿಂತು ಹೋದಂತೆ ನಟಿಸು ತ್ತಿದ್ದಾಳೆ. ಹೇಗಾದರೂ ಈ ಮದುವೆ ನಿಂತು ಹೋದರೆ ಸಾಕು. ನಾವಿಬ್ಬರೂ ಮದುವೆಮಾಡಿ ಕೊಳ್ಳುವ ಯೋಚನೆಮಾಡಿದ್ದೇವು" ಎಂದ.

ಯುವಕನು ಹೇಳಿದ್ದೆಲ್ಲಾ ಕೇಳಿ ಭರಮಪ್ಪನು ಸಂತೋಷಪಟ್ಟನು. ನಾಲ್ಕು ದಿನಗಳ ನಂತರ ಆ ಯುವಕನನ್ನು ಸಹ ತನ್ನ ಸಂಗಡ ಕರೆದು ಕೊಂಡು ಜಮೀನುದಾರನ ಮನೆಗೆ ಹೋದನು ಭರಮಪ್ಪ. ಜಮೀನುದಾರನು ಅವರನ್ನು ಎದುರುಗೊಂಡು, ತನ್ನ ಮಗಳಿದ್ದ ಕೋಣೆಗೆ ಕರೆದುಕೊಂಡು ಹೋದನು.

ಭರಮಪ್ಪನೊಂದಿಗೆ ಬಂದಿದ್ದ ಯುವಕ ನನ್ನು ನೋಡಿದಕೂಡಲೇ ಜಮೀನುದಾರನ ಮಗಳು ಮಂಚದಮೇಲಿಂದ ಎದ್ದು ಕುಳಿತು ಸ್ವರ ವೆತ್ತಿ ಬಡಬಡಿಸಹತ್ತಿದಳು. ತಂದೆ ನಿಶ್ಚಯಿಸಿದ ವರನನ್ನು ಮದುವೆಯಾಗುವುದಿಲ್ಲವೆಂದೂ, ಬಲ ವಂತಪಡಿಸಿದರೆ ಬಾವಿಯಲ್ಲಿ ಬಿದ್ದು ಸಾಯುವೆ ನೆಂದೂ ಹೆದರಿಸಿದಳು.

ಮಗಳು ಈ ರೀತಿ ವಟವಟಿಸುವುದನ್ನು ಕೇಳಿ ಜಮೀನುದಾರನಿಗೆ ಮಿತಿಮೀರಿ ಕೋಪಬಂತು. "ಅಯ್ಯಾ ವೈದ್ಯರೇ, ಮತ್ತೆ ಈ ಹುಡುಗಿಗೆ ಮಾತು ನಿಂತುಹೋಗುವಂತೆ ಯಾವುದಾದರೂ ಮದ್ದು ಕೊಡಿ. ಅವಳ ಕಾಡು ಹರಟೆಕೇಳಲಾರೆ; ಕಿವಿಕಿವುಡಾಗುತ್ತಿದೆ" ಎಂದ. ಅದಕ್ಕೆ ಭರಮಪ್ಪ, "ಮಾತು ನಿಲ್ಲುವಂತೆ ಮದ್ದುಕೊಡಲಾರೆ. ಬೇಕಾದರೆ ಹೇಳಿ, ನಿಮಗೆ ಕಿವಿಡು ಬರುವಂತೆ ಔಷಧಿ ಕೊಡುವೆನು" ಎಂದ.

ಜಮೀನುದಾರನು ಪೆಚ್ಚಾದ. ಮತ್ತೇನು ಮಾತನಾಡಲಾರದೆ ಮಗಳನ್ನು ಅವಳು ತನ್ನೊಳಗೆ ವರಿಸಿದ ಯುವಕನಿಗೇ ಕೊಟ್ಟು ವಿವಾಹ ಮಾಡಲು ನಿರ್ಧರಿಸಿದನು.

ಭರಮಪ್ಪ ಮನೆಗೆ ಬಂದು, ಹೆಂಡತಿಗೆ ತನ್ನ ವೈದ್ಯದ ವಿಷಯ, ತಾನು ಸಂಪಾದಿಸಿದ ಹಣದ ವಿಷಯ ತಿಳಿಸಿದ.

ತನ್ನ ಹಂಚಿಕೆ ವಿಫಲವಾದುದಕ್ಕೆ ರಂಗಮ್ಮ ನಿಗೆ ತುಂಬಾ ಆಶಾಭಂಗವಾಯಿತು. ಆದರೆ ಆಕೆ ತನ್ನ ಗಂಡನ ತಿಳುವಳಿಕೆಯನ್ನು ಮೆಚ್ಚಿ ಕೊಂಡಳು.

ಭರಮಪ್ಪ ಹೆಂಡತಿಗೆ ಕಿರುಕುಳಕೊಡುವುದು ಅಂದಿನಿಂದ ನಿಂತುಹೋಯಿತು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1957 ಏಪ್ರಿಲ್ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಫಿಬ್ರವರಿ 10 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.

ವಿಳಾಸ: **ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು - 26.**

---

### ಈ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ: "ನಮ್ಮಲ್ಲಿ ಒಗ್ಗಟ್ಟಿದ್ದರೂ ಬಲವಿಲ್ಲ"

ಎರಡನೇ ಫೋಟೋ: "ಅಯ್ಯೊ ನಮ್ಮಲ್ಲಿ ನೋಡು, ಬಲವಿದ್ದರೂ ಒಗ್ಗಟ್ಟಿಲ್ಲ"

ಕಳಿಸಿದವರು: ಎಸ್. ಬಾಲಸುಬ್ರಹ್ಮಣ್ಯಂ,

೧೪೩೩, ಹಳೇ ಅಗ್ರಹಾರ, ಕೆ. ಆರ್. ಮೊಹಲ್ಲಾ, ಮೈಸೂರು.

**ಬಹುಮಾನ ರೂ. 10/-ನ್ನು ಈ ತಿಂಗಳಿನಲ್ಲಿ ಕಳುಹಿಸಲ್ಪಡುತ್ತದೆ.**

# ಮೂರ್ಖ ಸನ್ಯಾಸಿ

ಒಬ್ಬ ಮೂರ್ಖನಿದ್ದ. ಅವನನ್ನು ಯಾರೂ ಗೌರವಿಸುತ್ತಿರಲಿಲ್ಲ. ಆದುದರಿಂದ ಆತ ಸನ್ಯಾಸಿಯಾಗಿಬಿಟ್ಟ. ಆಗಕೂಡ ಅವನನ್ನು ಬಲ್ಲವರಾರೂ ಅವನನ್ನು ಗೌರವಿಸಲಿಲ್ಲ.

ಒಂದು ದಿನ ಆ ಸನ್ಯಾಸಿ ಒಂದು ಬೀದಿಯಲ್ಲಿ ಹೋಗುತ್ತಿರುವಾಗ ಒಂದು ಟಗರು ಇದಿರಾಯಿತು. ಅದು ಸನ್ಯಾಸಿಯನ್ನು ನೋಡಿ ಹಿಂದೆ ಹಿಂದೆ ಹೋಗತೊಡಗಿತು.

"ಆಹಾ! ನನ್ನ ದೊಡ್ಡತನವನ್ನು ಈ ಟಗರೊಂದು ಕಂಡುಹಿಡಿಯಿತಲ್ಲಾ ಎಂದು ಆ ಮೂರ್ಖ ಸನ್ಯಾಸಿ ಪರಮಾನಂದ ಪಡೆದ. ಕೈಯೆತ್ತಿಕೊಂಡು ಅದನ್ನು ಆಶೀರ್ವದಿಸಲಿಕ್ಕಾಗಿ ಮುಂದೆ ಅಡಿಯಿಟ್ಟನು.

ಆ ಸಮಯದಲ್ಲಿ ದಾರಿಯಲ್ಲಿ ಹೋಗುವವನೊಬ್ಬ—"ಆ ಟಗರನ್ನು ನಂಬಬೇಡಿ ಸ್ವಾಮಿ! ಅದು ಬಹಳ ತುಂಟು!" ಎಂದು ಎಚ್ಚರಿಸಿದ.

ಸನ್ಯಾಸಿ ಆ ಮಾತನ್ನು ನಂಬದೆ ಟಗರನ್ನು ಸಮೀಪಿಸಿದ. ಕೆಲವು ಹಜ್ಜೆ ಹಿಂದಕ್ಕೆ ಹೋದ ಆ ಟಗರು ಧಿಡುಕ್ಕನೆ ಮುಂದಕ್ಕೆ ಓಡಿಬಂದು ಆ ಸನ್ಯಾಸಿಯನ್ನು ಕುಟ್ಟಿ ಬೀಳಿಸಿಹಾಕಿತು.

ಸನ್ಯಾಸಿ ಬೀದಿಯ ಮಣ್ಣಿನಲ್ಲಿ ಹೊರಳಿ ಇನ್ನಷ್ಟು ಕೆಂಪಾದ.



# ಹಣ್ಣಿನ ಹೆಣ್ಣು

ಒಬ್ಬ ಅರಸ ಒಮ್ಮೆ ರಸ್ತೆಯಲ್ಲಿ ಹೋಗುತ್ತಾ ಪೇರಳೇ ಹಣ್ಣು ಮಾರುವವಳನ್ನು ನೋಡಿದ. ಅವಳು ಬಹಳ ಸುಂದರಿ. ಅದಕ್ಕಾಗಿ ರಾಜ ಅವಳನ್ನು ಮದುವೆ ಮಾಡಿ ಕೊಂಡು ತನ್ನ ರಾಣಿಯನ್ನಾಗಿ ಮಾಡಿಕೊಂಡುಬಿಟ್ಟ.

ಕೆಲವು ವರ್ಷಗಳು ಕಳೆದುವು. ಒಂದು ದಿನ ರಾಜ ಒಂದು ಪೇರಳೇ ಹಣ್ಣು ತಿನ್ನುತ್ತಿರುವುದನ್ನು ರಾಣಿ ನೋಡಿ—"ಸ್ವಾಮಿಾ, ನೀವು ತಿನ್ನುವುದು ಎಂಥ ಹಣ್ಣು?" ಎಂದು ಕೇಳಿದಳು.

ಕೋಪದಿಂದ ರಾಜನ ಹುಬ್ಬು ಗಂಟುಬಿತ್ತು—"ಅಷ್ಟರಲ್ಲೇ ಮರೆತುಬಿಟ್ಟೆಯಾ? ಒಂದುಕಾಲದಲ್ಲಿ ಈ ಪೇರಳೇ ಹಣ್ಣುತಾನೇ ನಿನ್ನ ಕುಟುಂಬಕ್ಕೆ ಆಧಾರವಾಗಿತ್ತು? ಆಂ?" ಎಂದ.

ರಾಣಿಯ ಮರೆವಿನಿಂದ ರಾಜನಿಗೆ ಕೋಪ ಬಂತೆಂದು ಮಂತ್ರಿ ಕೂಡಲೇ ಗ್ರಹಿಸಿದ. "ಮಹಾರಾಜಾ, ಹೆಂಗುಸರು ಪದವಿಗೆ ತಕ್ಕಹಾಗೆ ನಿಮಿಷದಲ್ಲೆ ಬದಲಾ ಯಿಸಿಬಿಡುತ್ತಾರೆ. ಇವಳಿಗೆ ಮಹಾರಾಣಿಯ ಪದವಿ ಕೊಟ್ಟದ್ದು ತಾವೇ ಅಲ್ಲವೇ? ಆದ್ದರಿಂದ ಶಾಂತಿಸಬೇಕು" ಎಂದು ಸಮಜಾಯಿಸಿದ.






## ಪ್ರೊ ಫೆ ಸರ್ ಪಿ. ಸಿ. ಸರ್ಕಾರ್

ಈ ಆಟವನ್ನು ಪ್ರಾರಂಭಿಸುವಮುಂಚೆ ಐಂದ್ರಜಾಲಿಕನು ರಂಗಕ್ಕೆ ಬಂದು, ಪ್ರೇಕ್ಷಕರಲ್ಲಿ ಒಬ್ಬನನ್ನು ರಂಗಸ್ಥಳಕ್ಕೆ ಕರೆಯಬೇಕು. ಬಹಳ ಗೌರವದಿಂದ ಅವನನ್ನು ಸ್ವಾಗತಿಸಿ ಒಂದು ಕುರ್ಚಿಯಮೇಲೆ ಕೂಡಿಸಬೇಕು. ಸ್ವಲ್ಪಹೊತ್ತು ಅವನೊಡನೆ ಲೋಕಾಭಿರಾಮವಾಗಿ ಆ ಮಾತು ಈ ಮಾತು ಆಡಿ ಅವನು ಧರಿಸಿದ ನೆಕ್‌ಟೈಯ ಮೇಲೆ ಕಣ್ಣು ಹಾಕಬೇಕು.

ತರುವಾಯ ಸಮಯೋಚಿತ ವಾಗಿ ಮಾತಿಗೆತೊಡಗಿ—ಈಗ ನಮ್ಮ ಭಾರತ ದೇಶದಲ್ಲಿ ನೆಕ್‌ಟೈ ಧರಿಸುವ ಆಚಾರವಿಲ್ಲ, ನಿಮಗೇಕೆ? ಎಂದು ಹೇಳುತ್ತಾ ಹದನಾದ ಕತ್ತರಿಯಿಂದ ಅದನ್ನು ಪಕ್ಕದಲ್ಲಿರುವ ಚಿತ್ರದಲ್ಲಿ ತೋರಿಸಿದಂತೆ ಕತ್ತರಿಸಬಿಡಬೇಕು.

ಐಂದ್ರಜಾಲಿಕನು ಅದನ್ನು ತುಂಡು ತುಂಡಾಗಿ ಕತ್ತರಿಸುವುದು ಮಾತ್ರವಲ್ಲ, ಮೇಜಿಯಮೇಲೆ ಬೆಳಗಿಸಿಟ್ಟ ಕ್ಯಾಂಡಲ್ ದೀಪದಲ್ಲಿ ಸುಟ್ಟು ಬಿಸುಟುಬಿಡುತ್ತಾನೆ. ಅನಂತರ ಒಬ್ಬ ಸಹಚರನು ಐಂದ್ರಜಾಲಿಕನ ಬಳಿಗೆ ಬಂದು, ಏನೋ ಬಹಳ ಮೋಸವಾದಹಾಗೆ 'ಈತನು ಭಾರತೀಯನಲ್ಲ, ದೊರೆಕುಮಾರ. ಇವರಿಗೆ ನೆಕ್‌ಟೈ ಧರಿಸುವ ಆಚಾರವುಂಟು' ಎಂದು ಹೇಳುತ್ತಾನೆ. ಇದನ್ನು ಕೇಳಿ ಐಂದ್ರಜಾಲಿಕನು ಸ್ವಲ್ಪ ಗಾಬರಿಯಾದಂತೆ ಆಶ್ಚರ್ಯಪಟ್ಟು, ಮರುಕ್ಷಣದಲ್ಲೆ ತನ್ನ ಮಂತ್ರದಂಡದಿಂದ ನೆಕ್‌ಟೈ ಯಥಾಪ್ರಕಾರವಾಗಿ ಅವನ ಕುತ್ತಿಗೆಯಲ್ಲಿ ಇರುವಂತೆ ಮಾಡಿಬಿಡುತ್ತಾನೆ.

ಈ ಅದ್ಭುತವನ್ನು ನೋಡಿ ಪ್ರೇಕ್ಷಕರೆಲ್ಲಾ ಅತ್ಯಾಶ್ಚರ್ಯಪಡುತ್ತಾರೆ. ಆದರೆ ಇದರ ಗುಟ್ಟು ಇಷ್ಟೇ: ಆ ರಂಗಸ್ಥಳಕ್ಕೆ ಕರೆಯುವ ವ್ಯಕ್ತಿ ಐಂದ್ರಜಾಲಿಕನ ಅಂತರಂಗಿಕನೇ ಆಗಿರುತ್ತಾನೆ. ಅವನು ಮೊದಲೇ ಪ್ರತ್ಯೇಕವಾಗಿ ತಯಾರು ಮಾಡಲ್ಪಟ್ಟ

ನೆಕ್‌ಟೈ ಧರಿಸಿರಬೇಕು. ಒಂದೇ ತರದ ಎರಡು ನೆಕ್‌ಟೈಗಳನ್ನು ತಂದುಕೊಂಡು ಮೊದಲನೇದನ್ನು '1' ರಂತೆ ಇಟ್ಟುಕೊಳ್ಳಬೇಕು. ಗಂಟು ಹಾಕಿದಲ್ಲಿ ಮಿಕ್ಕಭಾಗವೆಲ್ಲಾ ಷರ್ಟನೊಳಗೆ ಅಡಗಿಸಿಟ್ಟುಕೊಂಡಿರಬೇಕು. ಎರಡನೇ ನೆಕ್‌ಟೈಯ ಮುಂದಿನ 'ಫ್ಲಾಪ್' ನ '2' ಭಾಗವನ್ನು ಕತ್ತರಿಸಿ '1' ನೆಕ್‌ಟೈ ಗಂಟಿನಕೆಳಗೆ ಚಿತ್ರದಲ್ಲಿ ತೋರಿಸಿದಂತೆ ಸಂದು ಬಿಡಿಸಿಬಿಟ್ಟರೆ ನಿಜವಾಗಿ ನೆಕ್‌ಟೈ ಎಂದೇ ಭ್ರಮೆ ಉಂಟಾಗುತ್ತದೆ. ಐಂದ್ರಜಾಲಿಕನು ಈಭಾಗವನ್ನೆ ಕತ್ತರಿಸಿ ಸುಟ್ಟು ಹಾಕುವುದು.

ತರುವಾಯ ಮಂತ್ರದಂಡದಿಂದ ಷರ್ಟಿನ ಒಳಗಿರುವ ನೆಕ್‌ಟೈಯನ್ನು ಹೊರಗೆ ಎಳೆದು ಬಿಡಬೇಕು. ಅಷ್ಟೇ ಇದು ಸ್ವಲ್ಪ ಕಷ್ಟವಾದ ಮ್ಯಾಜಿಕ್. ಇದರಲ್ಲಿರುವುದೆಲ್ಲಾ ನಟನಾ ಚಾತುರ್ಯವೇ.

ಅಮೆರಿಕದ ಐಂದ್ರಜಾಲಿಕರು ಬಹಳಮಂದಿ ಇದನ್ನು ನಿರ್ದುಷ್ಟವಾಗಿ ಮಾಡಿ ತೋರಿಸುತ್ತಾರೆ. ಮೊತ್ತಕ್ಕೆ ಮಹಾ ಕಷ್ಟವೇನಿಲ್ಲ. ಸ್ವಲ್ಪ ಹಾಸ್ಯ ಧೋರಣೆಯಲ್ಲಿ ಮಾತಾಡುತ್ತಾ ಮಾಡಿದರೆ ಇದೊಂದು ಅದ್ವಿತೀಯವಾದ ಆಟವಾಗಿರುತ್ತೆ.

---

[ಪಾಠಕರಿಗೆ ಈ ಗಾರುಡಿಯನ್ನು ಕುರಿತು ಇನ್ನೇನಾದರೂ ಸಲಹೆ ಬೇಕಾದರೆ, ಇಂಗ್ಲೀಷಿನಲ್ಲಿ ಬರೆಯಿರಿ: ಪ್ರೊಫೆಸರ್, ಪಿ. ಸಿ. ಸರ್ಕಾರ್, ಮೆಜಿಷಿಯನ್, P. O. ಬಾಲೀಗಂಜ್, ಕಲಕತ್ತಾ-19.]





# ವಾರ್ತೆಗಳು-ವಿಶೇಷಗಳು

ವಿದ್ಯಾಸಮಸ್ಯೆಗಳನ್ನು ಕುರಿತು ಮಹಾತ್ಮಾ ಗಾಂಧಿ ಪ್ರಕಟಪಡಿಸಿದ ಅಭಿಪ್ರಾಯಗಳನ್ನು ಕಾಕಾಕಲೇಲ್ಕರರ ಸಹಕಾರದಿಂದ ಶೇಖರಣೆ ಮಾಡಿ ಒಂದು ಪ್ರತ್ಯೇಕ ಪುಸ್ತಕವನ್ನು ಪ್ರಕಟಿಸಲಿಕ್ಕೆ ಭಾರತಸರಕಾರದ ವಿದ್ಯಾ ಶಾಖೆಯಲ್ಲಿ ಪ್ರಯತ್ನ ಜರುಗುತ್ತದೆ.

*    *    *

೧೪ - ೧೧ - ೧೯೫೬ ರಲ್ಲಿ ಶಿವಮೊಗ್ಗದಲ್ಲಿ ಪ್ರಪ್ರಥಮವಾಗಿ ನಡೆದ ಮಕ್ಕಳ ಪ್ರದರ್ಶನದಲ್ಲಿ, ಶಿವಮೊಗ್ಗಾ ಅಶೋಕ ಬೀಡಿ ಮಾಲಿಕರಾದ ಶ್ರೀ ಎಚ್. ನಾಗಪ್ಪನವರ ಮಗು ಮಂಜುನಾಥನೆಂಬ ಮೃದುನಗುವಿನ ಹಸುಗೂಸಿಗೆ ಪ್ರಥಮ ಬಹುಮಾನ ದೊರಕಿದೆ. ಚಿ. ಮಂಜುನಾಥನಿಗೆ ಉತ್ತರೋತ್ತರ ಶ್ರೇಯೋಭಿವೃದ್ಧಿ ಯಾಗಲೆಂದು ಸಂತೋಷದಿಂದ ಹಾರೈಸುತ್ತೇವೆ.

**ಭಾ**ರತರಾಜ್ಯಾಂಗದಲ್ಲಿ ಹೆಸರು ಪಡೆದಿರುವ ೧೪ ಭಾಷೆಗಳ ಶಾಖೆಗಳನ್ನು ಕಾಶಿಯ ಹಿಂದೂ ವಿಶ್ವವಿದ್ಯಾಲಯದಲ್ಲಿ ಏರ್ಪಾಡು ಮಾಡಬೇಕೆಂದು ಎಕಡೆಮಿಕ್ ಕೌನ್ಸಿಲ್ ವೈಸ್‌ಛಾನ್ಸಲರ್ ಡಾಕ್ಟರ್ ವೇಣಿಶಂಕರ್ ಅವರ ಅಧ್ಯಕ್ಷತೆಯಲ್ಲಿ ಜರುಗಿದ ವಾರ್ಷಿಕ ಸಮಾವೇಶದಲ್ಲಿ ತೀರ್ಮಾನಿಸಲಾಗಿದೆ.

*    *    *

**ಕ**ಳೆದ ಡಿಸೆಂಬರ್‌ನಲ್ಲಿ ಮೈಸೂರಿನ ಆಹಾರ ಪರಿಶೋಧನ ಕೇಂದ್ರದಲ್ಲಿ ನಡೆಸಿದ ಸಂಶೋಧನೆಯ ಫಲಿತವನ್ನು ತಿಳಿಸಲಾಗಿದೆ. ಗಂಡುಸರು ಆಹಾರದೊಂದಿಗೆ ಬೀನ್ಸನ್ನು ಹೆಚ್ಚಾಗಿ ಸೇವಿಸಿದರೆ ರಕ್ತದ ಒತ್ತಡವು ತಗ್ಗಿಹೋಗುತ್ತದಂತೆ. ಆ ಕೇಂದ್ರದ ಡೈರೆಕ್ಟರ್ ಶ್ರೀ ಸುಬ್ರಹ್ಮಣ್ಯಂ ಅವರು ಈ ವಿಷಯ ತಿಳಿಸಿದ್ದಾರೆ. ಮೈಸೂರು ಮುಖ್ಯ



ಮಂತ್ರಿ ಶ್ರೀ ನಿಜಲಿಂಗಪ್ಪನವರು ಆ ಕೇಂದ್ರವನ್ನು ಸಂದರ್ಶಿಸಿದಾಗ ಈ ವಿಷಯವನ್ನು ಅವರಿಗೆ ತಿಳಿಸಲಾಯಿತು.

* * *

**ನಾ**ಗಾರ್ಜುನ ಕೊಂಡ ಪ್ರಾಂತದಲ್ಲಿ ಇತ್ತೀಚಿಗೆ ದೊರೆತ ಒಂದು ಅಮೂಲ್ಯ ಶಾಸನವು ಚರಿತ್ರೆಯ ಮೇಲೆ ಹೊಸ ಬೆಳಕು ಬೀರುವಂತಿದೆ. ಇದರಿಂದ ಸಂಸ್ಕೃತವು ಕ್ರಿ. ಶ. ೩ ನೇ ಶತಾಬ್ದದಲ್ಲೇ ಈ ಪ್ರಾಂತದಲ್ಲಿ ವ್ಯವಹಾರದಲ್ಲಿತ್ತೆಂದು ಊಹಿಸಲು ಅವಕಾಶವಾಗಿದೆ.

ಐದನೇ ಶತಾಬ್ದದಲ್ಲಿ ಸಮುದ್ರಗುಪ್ತನು ಈ ಪ್ರಾಂತದಲ್ಲಿ ಬಲವಂತಾಗಿ ಸಂಸ್ಕೃತ ಭಾಷೆಯನ್ನು ವ್ಯವಹಾರಕ್ಕೆ ತಂದನೆಂಬ ವಾದವು ಈ ಶಾಸನದಿಂದ ಅಸ್ತಮಿಸುತ್ತದೆ. ಈ ಶಾಸನವು ಬ್ರಹ್ಮಲಿಪಿಯಲ್ಲಿದೆ. ಕುಮಾರನಂದಿ ಎಂಬವನು ಒಂದು ಶಿಲಾ ವಿಗ್ರಹವನ್ನು ಪ್ರತಿಷ್ಠಿಸಿದನೆಂದು ಈ ಶಾಸನ ತಿಳಿಸುತ್ತದೆ.

* * *

**ಹೊ**ಸದಾಗಿ ಬುದ್ಧ ಮತಕ್ಕೆ ಸೇರಿದ ಡಾ. ಅಂಬೇಡ್ಕರ್ ಕಳೆದ ಡಿಸಂಬರ್‌ನಲ್ಲಿ ನಿಧನರಾದರು.

**ಬಂ**ದಾ ಎಂಬಲ್ಲಿ ಮೊನ್ನೆ ಡಿಸೆಂಬರ್‌ನಲ್ಲಿ ಒಂದು ವಿಚಿತ್ರ ನಡೆಯಿತು. ನೂರು ರೂಪಾಯಿಯ ಹತ್ತು ನೋಟುಗಳನ್ನು ಒಬ್ಬಳು ಮುದುಕಿಯ ಮಗ ಒಂದು ಹಳೆಯ ಪುಸ್ತಕದೊಳಗೆ ಇಟ್ಟಿದ್ದನಂತೆ. ಅವನಿಗೆ ಹಳೆಯ ಪುಸ್ತಕಗಳಲ್ಲಿಯೂ, ಖಾಲೀ ಪುಸ್ತಕದಲ್ಲಿಯೂ ಹಣವಿಡುವ ಅಭ್ಯಾಸ. ಆತ ಕೆಲಸದಮೇಲೆ ಹೋದಾಗ ಮುದುಕಿ ಹಳೆಯ ಪುಸ್ತಕ ಕಾಗದಗಳನ್ನು ಒಂದು ಅಂಗಡಿಯವನಿಗೆ ಮಾರಿಬಿಟ್ಟಳು. ಮಗ ಮನೆಗೆ ಬಂದು ಒಂದು ಸಾವಿರ ರೂಪಾಯಿ ಹೋದ ಸಂಗತಿ ಕೇಳಿ ಕೈ ಕಾಲು ಗೆಟ್ಟ. ಮುದುಕಿಯೂ ಗೋಳಿಟ್ಟಳು.

* * *

**ಭಾ**ರತಸರಕಾರವು ತನಗೆ ಅಗತ್ಯವಿರುವ ವಸ್ತುಗಳನ್ನು ಸಣ್ಣ ಎತ್ತುಗಡೆಯ ಪರಿಶ್ರಮಗಳಿಂದಲೇ ಕೊಂಡುಕೊಳ್ಳಲು ನಿಶ್ಚಯ ಮಾಡಿದೆ. ದೇಶದಲ್ಲಿ ಸುಮಾರು ೩೦-೪೦ ಚಿಕ್ಕ ಪರಿಶ್ರಮಗಳನ್ನು ಪ್ರೋತ್ಸಾಹಿಸಲು ಈ ನಿರ್ಣಯ ಮಾಡಿದೆ. ಈ ಮೊದಲೇ ಸರಕಾರವು ಚಿಕ್ಕ ಪರಿಶ್ರಮಗಳಿಂದ ೩ಕೋಟಿ ೭೨ ಲಕ್ಷ ಬೆಲೆಬಾಳುವ ಸರಕುಗಳನ್ನು ಕೊಂಡು ಕೊಂಡಿರುತ್ತದೆ.



# ಚಿತ್ರ ಕಥೆ





ಒಂದು ಸಾಯಂಕಾಲ ವಾಸು ಮತ್ತು ಗೋಪಿ ಏನಾದರೂ ತಿಂಡಿ ತೆಕ್ಕೊಳ್ಳೋಣವೆಂದು ಮಾತಾಡುತ್ತಾ ಒಂದು ಪಾರ್ಕಿಗೆ ಹೋದರು. ದಾರಿಯಲ್ಲೊಬ್ಬ ಕಳ್ಳಹುಡುಗ ವಾಸುವಿನ ಜೇಬಿನಲ್ಲಿದ್ದ ಎರಡಾಣೆ ಕದ್ದುಬಿಟ್ಟ. ಇದು ಅವನಿಗೆ ಗೊತ್ತಾಗಲಿಲ್ಲ. ಆದರೆ 'ಟೈಗರ್' ಆ ಕಳ್ಳಹುಡುಗನ ಹಿಂದೆಯೇ ಹೋಯಿತು. ಆ ಕಳ್ಳ ಅಂಗಡಿಗೆ ಹೋಗಿ ಮಿಠಾಯಿ ಪೊಟ್ಲ ಕೊಂಡುಕೊಂಡ. ಅದನ್ನಲ್ಲಿಟ್ಟು ಹಣ ಕೊಡುವಾಗ, 'ಟೈಗರ್' ಆ ಪೊಟ್ಣವನ್ನು ಗಬಕ್ಕನೆ ಕಚ್ಚಿಕೊಂಡು ಓಟಾಕಿತ್ತು ನೇರಾಗಿ ವಾಸು ಗೋಪಿಯರ ಬಳಿಗೆ ಬಂತು. ಕಳ್ಳಹುಡುಗ ಸ್ವಲ್ಪದೂರ ಓಡಿ, ಮತ್ತೆ ಅಂಜಿಕೊಂಡು ಪಲಾಯನಮಾಡಿದ.





Printed by B. NAGI REDDI at the B. N. K. Press (Private) Ltd., and Published by him for Chandamama Publications, from Madras 26—Controlling Editor: SRI 'CHAKRAPANI'

# ನೋಡಿ! ಅರ್ಧ ಸನ್‌ಲೈಟ್

## ಸೋಪೇ ಇಷ್ಟೆಲ್ಲಾ ಬಟ್ಟೆಗಳನ್ನು

## ಒಗೆದಿದೆ!



*ಅದರಲ್ಲಿರುವ ಹೆಚ್ಚಿನ ನೊರೆಯಿಂದಲೇ ಇದು ಸಾಧ್ಯವಾಯಿತು!*




**ಸನ್‌ಲೈಟ್**

**ಸೋಪು**

ಬಟ್ಟೆಗಳನ್ನು ಬೆಳ್ಳಗೆ ಮತ್ತು ಪ್ರಕಾಶಮಾನವಾಗಿ ಒಗೆಯುತ್ತದೆ.

S. 243-50 KN

ಭಾರತದಲ್ಲಿ ತಯಾರಿಸಲ್ಪಟ್ಟಿದೆ

ಚಲನ ಚಿತ್ರ ಇತಿಹಾಸದಲ್ಲಿ
ಕೆಂಪರಾಜರ ಮತ್ತೊಂದು
ಮಹೋನ್ನತ
ಚಿತ್ರ ....



# ನಳದಮಯಂತಿ

..ಕನ್ನಡ..



ನಿರ್ಮಾಪಕ
ನಿರ್ದೇಶಕ
**ಕೆಂಪರಾಜ್**

a **RAJ** *Release* ...

DHR

NEGATIVE RIGHTS FOR MYSORE STATE, S.CANARA & COORG. CONTROLLED BY..
**GOLDEN FILMS** (PRIVATE) **LTD**, MADRAS-17.

Photo by D. I. Chanthamian



ಬಹುಮಾನ
ಪಡೆದ ಶೀರ್ಷಿಕೆ

"ಅಯ್ಯೋ ನಮ್ಮಲ್ಲಿ ನೋಡು,
ಬಲವಿದ್ದರೂ ಒಗ್ಗಟ್ಟಿಲ್ಲ!"

ಕಳಿಸಿದವರು:
ಎಸ್. ಬಾಲಸುಬ್ರಹ್ಮಣ್ಯಂ

